CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೫, ೨೦೦೫ ( ಭಾದ್ರಪದ ೨೪, ಶಕ ವರ್ಷ ೧೯೨೭) | ಸಂಚಿಕೆ ೩೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಪ್ರಿಯದರ್ಶಿನಿ ಎಂ. ದೇವದುರ್ಗ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (2) 36: 2003-04 ದಿನಾಂಕ: 11.03.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪ್ರಸ್ತಾವನೆಯಲ್ಲಿ ಡಾ: ಪ್ರಿಯದರ್ಶಿನಿ ಎಂ. ದೇವದುರ್ಗ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ನಿಂಬರ್ಗ, ಆಳಂದ ತಾಲ್ಲೂಕು, ಗುಲ್ಬರ್ಗ ಜಿಲ್ಲೆ, ಇವರು ದಿನಾಂಕ: 25.10.2002 ರಂದು ಸೇವೆಗೆ ಸೇರಿದ್ದು ದಿನಾಂಕ: 27.11.2003 ರಂದು ರಜೆ ಅರ್ಜಿ ಸಲ್ಲಿಸಿ, ಸ್ನಾತಕೋತ್ತರ ವ್ಯಾಸಂಗಕ್ಕೆ ಹೋಗಲು ಅನುಮತಿ ನೀಡುವಂತೆ ಕೋರಿ, ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರು ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಲು ಸರ್ಕಾರದ ಪೂರ್ವಾನುಮತಿ ಪಡೆಯದೆ, ಅನಧಿಕೃತ ಗೈರುಹಾಜರಿಯಾಗಿ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯ ಲೋಪ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪನಿಯಮ 6ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 354 ಹೆಚ್‌ಎಸ್‌ಹೆಚ್ 2005 ಬೆಂಗಳೂರು, ದಿನಾಂಕ: 29ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಪ್ರಿಯದರ್ಶಿನಿ ಎಂ. ದೇವದುರ್ಗ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ನಿಂಬರ್ಗ, ಆಳಂದ ತಾಲ್ಲೂಕು, ಗುಲ್ಬರ್ಗ ಜಿಲ್ಲೆ, ಇವರು ದಿನಾಂಕ: 27.11.2003 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 27.11.2003 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಕೆ. ತೆಗ್ಗಿನಮನಿ**

ಪಿ.ಆರ್.1167

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ :** ಡಾ: ಶರಣಬಸಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (2) 37: 2003-04 ದಿನಾಂಕ: 11.03.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪ್ರಸ್ತಾವನೆಯಲ್ಲಿ ಡಾ: ಶರಣಬಸಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ನಿಂಬರ್ಗ, ಆಳಂದ ತಾಲ್ಲೂಕು, ಗುಲ್ಬರ್ಗ ಜಿಲ್ಲೆ, ಇವರು ದಿನಾಂಕ: 05.09.2002

ರಂದು ಸೇವೆಗೆ ಸೇರಿದ್ದು ದಿನಾಂಕ: 04.12.2003 ರಂದು ರಜೆ ಅರ್ಜಿ ಸಲ್ಲಿಸಿ, ಸ್ನಾತಕೋತ್ತರ ವ್ಯಾಸಂಗಕ್ಕೆ ಹೋಗಲು ಅನುಮತಿ ನೀಡುವಂತೆ ಕೋರಿ, ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರು ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಲು ಸರ್ಕಾರದ ಪೂರ್ವಾನುಮತಿ ಪಡೆಯದೆ, ಅನಧಿಕೃತ ಗೈರುಹಾಜರಿಯಾಗಿ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯ ಲೋಪ ಎಸಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿ 1977ರ ಉಪನಿಯಮ 6ರ ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 353 ಹೆಚ್‌ಎಸ್‌ಹೆಚ್ 2005 ಬೆಂಗಳೂರು, ದಿನಾಂಕ: 29ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಶರಣಬಸಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ನಿಂಬರ್ಗ, ಆಳಂದ ತಾಲ್ಲೂಕು, ಗುಲ್ಬರ್ಗ ಜಿಲ್ಲೆ, ಇವರು ದಿನಾಂಕ: 04.12.2003 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 04.12.2003 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಕೆ. ತೆಗ್ಗಿನಮನಿ**

ಪಿ.ಆರ್.1168

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ 2005-06ನೇ ಸಾಲಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಇವರಪತ್ರ ಸಂಖ್ಯೆ: ಕಸನಿ:2:ಕಪುಪ್ರಾ: ಅನುದಾನ:2005-06, ದಿನಾಂಕ: 16.06.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಇವರು ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ 2005-06ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2205-00-102-1-46-059 (ಯೋಜನೆ) ಅಡಿಯಲ್ಲಿ ರೂ.22.00 ಲಕ್ಷ ಹಣ ಹಂಚಿಕೆಯಾಗಿದ್ದು, ಇದರಲ್ಲಿ ರೂ.8.12 ಲಕ್ಷ ಪ್ರಾಧಿಕಾರದ ಖಾಯಂ ಅಧಿಕಾರಿ: ಸಿಬ್ಬಂದಿ ವೇತನ ಭತ್ಯೆ ಹಾಗೂ ರೂ.13.88 ಲಕ್ಷಗಳನ್ನು ಪ್ರಾಧಿಕಾರದ ಚಟುವಟಿಕೆಗಳಿಗೆ ಒದಗಿಸಲಾಗಿದೆ. ಅಧಿಕಾರಿ/ಸಿಬ್ಬಂದಿ ವೇತನ ಭತ್ಯೆಗಾಗಿ ರೂ.8.12 ಲಕ್ಷಗಳನ್ನು ಕಾದಿರಿಸಿ, ಇತರ ಚಟುವಟಿಕೆಗಳಿಗಾಗಿ ರೂ.13.88 ಲಕ್ಷಗಳಲ್ಲಿ ಅರ್ಧವಾರ್ಷಿಕವಾಗಿ ರೂ.6.94 ಲಕ್ಷಗಳನ್ನು ಕೆಲವು ಷರತ್ತುಗಳೊಂದಿಗೆ ಬಿಡುಗಡೆ ಮಾಡಲು ಕೋರಿದ್ದಾರೆ. ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 4 ಕಪ್ರಧ 2005, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2005**

ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ 2005-06ನೇ ಸಾಲಿನಲ್ಲಿ ಇತರೆ ಚಟುವಟಿಕೆಗಳಿಗಾಗಿ ಹಂಚಿಕೆ ಮಾಡಿರುವ ರೂ.13.88 ಲಕ್ಷಗಳಲ್ಲಿ ರೂ.6.94 ಲಕ್ಷ (ಆರು ಲಕ್ಷದ ತೊಂಬತ್ತು ನಾಲ್ಕು ಸಾವಿರ ರೂ.ಗಳು ಮಾತ್ರ)ಗಳ ಅನುದಾನವನ್ನು ಅರ್ಧವಾರ್ಷಿಕವಾಗಿ ಈ ಕೆಳಕಂಡ ಷರತ್ತುಗಳೊಂದಿಗೆ ಬಿಡುಗಡೆಗೊಳಿಸಲಾಗಿದೆ.

1. ಸರ್ಕಾರ ಯಾವ ಉದ್ದೇಶಕ್ಕಾಗಿ ಅನುದಾನವನ್ನು ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ವಿನಿಯೋಗಿಸುವುದು.
2. ಸರ್ಕಾರ ಮಂಜೂರು ಮಾಡಿದ ಅನುದಾನವನ್ನು ಸಮರ್ಪಕವಾಗಿ ಬಳಕೆ ಮಾಡಿದ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-102-1-46-059 (ಯೋಜನೆ) ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್. ಆರ್. ಸಂಬರಗಿ**

ಪಿ.ಆರ್.1169

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ :** ಬೆಂಗಳೂರು ವರ್ತೂರು ರಸ್ತೆಯ ಹೆಚ್. ಎ.ಎಲ್. ನಿಂದ ಕುಂದಲಹಳ್ಳಿ ಕ್ರಾಸ್‌ವರೆಗಿನ ರಸ್ತೆಯನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರ ಪತ್ರ ಸಂಖ್ಯೆ: ಬಿಡಿಎ:ಇಎಂ:164:2005-06, ದಿನಾಂಕ: 11.07.2005.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಶಾ: ಕುಂದಲಹಳ್ಳಿ: ವಿನಿ: ಸಇಂ:5:116:2005-06 ದಿನಾಂಕ: 29.07.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪ್ರಸ್ತಾವನೆಯಲ್ಲಿ ದಿನಾಂಕ: 28.05.2005 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಎಂಪವರ್ಡ್ ಕಮಿಟಿ ಸಭೆಯಲ್ಲಿ

ಬೆಂಗಳೂರು ಪೂರ್ವ ತಾಲ್ಲೂಕಿನ ಬೆಂಗಳೂರು-ವರ್ತೂರು ರಸ್ತೆಯ ಹಿಂದೂಸ್ಥಾನ್ ಏರೋನಾಟಿಕ್ಸ್ ಲಿಮಿಟೆಡ್ ನಿಂದ ಕುಂದಲಹಳ್ಳಿ ಕ್ರಾಸ್ ಸರಪಳಿ 9.70 ಕಿಮೀ ನಿಂದ 14.70 ಕಿಮೀ ವರೆಗಿನ ಭಾಗವನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಅಭಿವೃದ್ಧಿಗಾಗಿ ಹಸ್ತಾಂತರಿಸಲು ಸೂಚನೆ ನೀಡಲಾಗಿರುತ್ತದೆಂದು ಪ್ರಾಧಿಕಾರದ ಆಯುಕ್ತರು ತಿಳಿಸಿರುವ ಸಂದರ್ಭದಲ್ಲಿ ಎಂಪವರ್ಡ್ ಕಮಿಟಿಯ ನಿರ್ಣಯದಂತೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಅಭಿವೃದ್ಧಿಗಾಗಿ ಪ್ರಸ್ತಾಪಿತ ರಸ್ತೆಯ ಸರಪಳಿ 9.70 ಕಿಮೀ. ನಿಂದ 14.70 ಕಿಮೀ ಉದ್ದದ ಭಾಗವನ್ನು ಹಸ್ತಾಂತರಿಸುವಲ್ಲಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 97 ಸಿಆರ್‌ಎಂ 05, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಬೆಂಗಳೂರು ಪೂರ್ವ ತಾಲ್ಲೂಕಿನ ಬೆಂಗಳೂರು-ವರ್ತೂರು ರಸ್ತೆಯ ಹಿಂದೂಸ್ಥಾನ್ ಏರೋನಾಟಿಕ್ಸ್ ಲಿಮಿಟೆಡ್ ನಿಂದ ಕುಂದಲಹಳ್ಳಿ ಕ್ರಾಸ್ ಸರಪಳಿ 9.70 ಕಿಮೀ ನಿಂದ 14.70 ಕಿಮೀ ವರೆಗಿನ ಭಾಗವನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶೇಖ್ ಅಬ್ದುಲ್ ವಾಜಿದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್.1171

## ಶಿಕ್ಷಣ ಸಚಿವಾಲಯ

**ವಿಷಯ :** ಮಾಜಿ ಶಿಕ್ಷಣ ಸಚಿವರಾದ ಶ್ರೀ ಎಚ್. ಜಿ. ಗೋವಿಂದಗೌಡ ಅವರ ಅವರ ಹೆಸರಿನಲ್ಲಿ ಅತ್ಯುತ್ತಮ ಸರ್ಕಾರಿ ಕನ್ನಡ ಶಾಲೆಗೆ ಪ್ರಶಸ್ತಿ ನೀಡಿಕೆ-ಉತ್ತಮ ಶಾಲೆಯನ್ನು ಆಯ್ಕೆ ಮಾಡಲು ರಾಜ್ಯ ಮಟ್ಟದ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 74 ಯೋಸಕ 2005, ದಿನಾಂಕ: 29.7.2005.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಆ3(3) ಪ್ರಾ.ಶಿ.517 ಉ.ಶಾ.ಪ್ರ:2: 2005-06 ದಿನಾಂಕ: 16.7.2005.

**ಪ್ರಸ್ತಾವನೆ:**

ಮಾಜಿ ಶಿಕ್ಷಣ ಸಚಿವ ಶ್ರೀ ಎಚ್. ಜಿ. ಗೋವಿಂದಗೌಡ ಅವರ ಹೆಸರಿನಲ್ಲಿ ರಾಜ್ಯದಲ್ಲಿನ ಅತ್ಯುತ್ತಮ ಸರ್ಕಾರಿ ಕನ್ನಡ ಶಾಲೆಗೆ ಪ್ರತಿವರ್ಷ ಶಿಕ್ಷಕರ ದಿನಾಚರಣೆಯಾದ ಸೆಪ್ಟೆಂಬರ್ 5 ರಂದು ಪ್ರಶಸ್ತಿ ನೀಡುವ ಬಗ್ಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 29.7.2005ರ ಸರ್ಕಾರಿ ಆದೇಶದಲ್ಲಿ ಮಾರ್ಗತ್ತ ಸೂಚಿಗಳನ್ನು ಹೊರಡಿಸಲಾಗಿತ್ತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 16.7.2005ರ ತಮ್ಮ ಪತ್ರದಲ್ಲಿ ಉತ್ತಮ ಶಾಲೆಯನ್ನು ಆಯ್ಕೆ ಮಾಡಲು ರಾಜ್ಯ ಮಟ್ಟದ ಸಮಿತಿ ರಚಿಸುವಂತೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 74 ಯೋಸಕ 2005 ಬೆಂಗಳೂರು, ದಿನಾಂಕ: 9ನೇ ಆಗಸ್ಟ್ 2005**

ಮಾಜಿ ಶಿಕ್ಷಣ ಸಚಿವ ಶ್ರೀ ಎಚ್. ಜಿ. ಗೋವಿಂದಗೌಡ ಅವರ ಹೆಸರಿನಲ್ಲಿ ಪ್ರಶಸ್ತಿ ನೀಡುವ ಸಲುವಾಗಿ ಶಾಲೆಯನ್ನು ಆಯ್ಕೆ ಮಾಡಲು ಸರ್ಕಾರವು ಈ ಕೆಳಕಂಡ ಸದಸ್ಯರನ್ನೊಳಗೊಂಡ ರಾಜ್ಯಮಟ್ಟದ ಸಮಿತಿಯನ್ನು ರಚಿಸುತ್ತದೆ.

| | | |
|---|---|---|
| 1. | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು | - ಅಧ್ಯಕ್ಷರು |
| 2. | ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) | - ಉಪಾಧ್ಯಕ್ಷರು |
| 3. | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು | - ಸದಸ್ಯರು |
| 4. | ಶ್ರೀ ಎಚ್. ಜಿ. ವೆಂಕಟೇಶ್ C/o ಎಚ್. ಜಿ. ಗೋವಿಂದಗೌಡ, ಮಣಿಪುರ ಎಸ್ಟೇಟ್, ಕೊಪ್ಪ, ಚಿಕ್ಕಮಂಗಳೂರು ಜಿಲ್ಲೆ. | - ಸದಸ್ಯರು |
| 5. | ನಿರ್ದೇಶಕರು (ಪ್ರಾಥಮಿಕ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | - ಸದಸ್ಯರು |
| 6. | ನಿರ್ದೇಶಕರು (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | - ಸದಸ್ಯಕಾರ್ಯದರ್ಶಿ |
| 7. | ಅಧ್ಯಕ್ಷರು, ಪ್ರಾಥಮಿಕ ಶಿಕ್ಷಕರ ಸಂಘ, ಬೆಂಗಳೂರು | - ಸದಸ್ಯರು |
| 8. | ಅಧ್ಯಕ್ಷರು, ಪ್ರೌಢ ಶಿಕ್ಷಕರ ಸಂಘ | - ಸದಸ್ಯರು |

ಪ್ರಶಸ್ತಿಯನ್ನು 2005-06ನೇ ಸಾಲಿನಲ್ಲಿ ಮೈಸೂರು ವಿಭಾಗಕ್ಕೆ 2006-07ರಲ್ಲಿ ಬೆಳಗಾವಿ ವಿಭಾಗಕ್ಕೆ, 2007-08ರಲ್ಲಿ ಗುಲ್ಬರ್ಗಾ ವಿಭಾಗಕ್ಕೆ ಹಾಗೂ 2008-09ರಲ್ಲಿ ಬೆಂಗಳೂರು ವಿಭಾಗಕ್ಕೆ ನೀಡತಕ್ಕದ್ದು ಅತ್ಯುತ್ತಮ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳನ್ನು ಗುರುತಿಸಲು ತಾಲ್ಲೂಕು ಮಟ್ಟದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳೂ ಈ ಕೆಳಕಂಡ ಕ್ರಮ ಕೈಗೊಳ್ಳುತ್ತಾರೆ.

1. ಪ್ರತಿ ತಾಲ್ಲೂಕಿನಿಂದ 1 ಸರ್ಕಾರಿ ಹಿರಿಯ ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆ ಮತ್ತು ಸರ್ಕಾರಿ ಕನ್ನಡ ಮಾಧ್ಯಮ ಪ್ರೌಢಶಾಲೆಯನ್ನು ಆಯ್ಕೆ ಮಾಡಬೇಕು. ಅತ್ಯುತ್ತಮ ಶಾಲೆಯನ್ನು ಆಯ್ಕೆ ಮಾಡುವ ಬಗ್ಗೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಸುತ್ತೋಲೆ ದಿನಾಂಕ: 9.11.2001ರ ಮಾರ್ಗಸೂಚಿಯಂತೆ ಕ್ರಮ ಕೈಗೊಳ್ಳಬಹುದು.
2. ಕ್ಷೇತ್ರ ಶಿಕ್ಷಣಾಧಿಕಾರಿಗಳು ಹೀಗೆ ಆಯ್ಕೆ ಮಾಡಿದ ಶಾಲೆಯ ಪಟ್ಟಿಯನ್ನು ಉಪ ನಿರ್ದೇಶಕರಿಗೆ ಸಲ್ಲಿಸಬೇಕು.

3. ಅತ್ಯುತ್ತಮ ಸರ್ಕಾರಿ ಮಾಧ್ಯಮ ಪ್ರೌಢಶಾಲೆಯನ್ನು ಆಯ್ಕೆ ಮಾಡುವಲ್ಲಿ ಗ್ರಾಮಾಂತರ ಪ್ರದೇಶಕ್ಕೆ ಆದ್ಯತೆ ನೀಡುವುದು.
4. ತಾಲ್ಲೂಕಿನಲ್ಲಿ ಅತೀ ಹೆಚ್ಚು ಎಸ್. ಎಸ್. ಎಲ್. ಸಿ. ಫಲಿತಾಂಶ ಪಡೆದ ಗ್ರಾಮಾಂತರ ಪ್ರದೇಶದ ಸರ್ಕಾರಿ ಕನ್ನಡ ಮಾಧ್ಯಮ ಪ್ರೌಢಶಾಲೆಯನ್ನು ಆಯ್ಕೆ ಮಾಡುವುದು.
5. ಪರೀಕ್ಷಾ ಸಂಬಂಧದ ದೂರುಗಳಿರುವ ಶಾಲೆಯನ್ನು ಪ್ರಶಸ್ತಿಗೆ ಆರಿಸಬಾರದು.
6. ಜಿಲ್ಲಾ ಮಟ್ಟದ ಶಿಕ್ಷಕ ಪ್ರಶಸ್ತಿಯ ಆಯ್ಕೆ ಸಮಿತಿ ಮುಂದೆ ಪಟ್ಟಿಯನ್ನು ಮಂಡಿಸಿ ಪ್ರತಿ ಜಿಲ್ಲೆಯಿಂದ ಬಂದ ಮಾಹಿತಿಯನ್ವಯ ಸರ್ಕಾರಿ ಹಿರಿಯ ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆ ಮತ್ತು ಸರ್ಕಾರಿ ಕನ್ನಡ ಮಾಧ್ಯಮ ಪ್ರೌಢಶಾಲೆಯನ್ನು ಆಯ್ಕೆ ಮಾಡಿ ರಾಜ್ಯಮಟ್ಟದ ಸಮಿತಿಗೆ ದಿನಾಂಕ: 17.08.2005ರ ಒಳಗೆ ಸಲ್ಲಿಸುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.1173

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹ ಕಾರ್ಯದರ್ಶಿ(ಯೋಜನೆ),
ಶಿಕ್ಷಣ ಇಲಾಖೆ.

## WATER RESOURCES SECRETARIAT

## ADDENDUM

**No. WRD 72 KBN 2004 (P-1) Bangalore, dated: 5th August 2005**

In the Notification No. WRD 72 KBN 2004 (P-1), dated: 1.8.2005 after "Limited" it may please be added and read as "in place of Shri K. K. Mishra"

By Order and in the name of the Governor of Karnataka,

**I. D. DHAMAN**

PR-1174

Under Secretary to Government (Tech),
Water Resources Department,
(KBJNL, Spl. cell).

## ಶಿಕ್ಷಣ ಸಚಿವಾಲಯ

**ವಿಷಯ :** ಗಡಿನಾಡು ಅಧ್ಯಯನ ವರದಿ ಶಿಫಾರಸ್ಸು-ಗಡಿಶಾಲೆಗಳ ಮೇಲ್ವಿಚಾರಣೆಗಾಗಿ ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ ಆಯುಕ್ತಾಲಯದ ನಿರ್ದೇಶಕರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಗಡಿನಾಡು ಅಧ್ಯಯನ ಆಯೋಗದ ವರದಿ ಅನುಷ್ಠಾನ ಸಮಿತಿಯ ದಿನಾಂಕ: 9.3.2005 ರಂದು ನಡೆಸಿದ ಸಭೆಯ ನಿರ್ಣಯ.

**ಪ್ರಸ್ತಾವನೆ:**

ಗಡಿನಾಡು ಅಧ್ಯಯನ ಆಯೋಗದ ವರದಿಯ ಅನುಷ್ಠಾನ ಸಮಿತಿಯು ದಿನಾಂಕ: 9.3.2005 ರಂದು ಸಭೆ ಸೇರಿ ಇತರ ನಿರ್ಣಯಗಳೊಡನೆ ಆಯೋಗದ ವರದಿಯಲ್ಲಿನ 2ನೇ ಶಿಫಾರಸ್ಸು ಕುರಿತು ಚರ್ಚಿಸಿ ಧಾರವಾಡ ಶಿಕ್ಷಣ ನಿರ್ದೇಶನಾಲಯದ ನಿರ್ದೇಶಕರನ್ನು ಗಡಿ ಶಾಲೆಗಳ ಮೇಲ್ವಿಚಾರಣೆಗಾಗಿ ನೇಮಕ ಮಾಡಬೇಕೆಂಬ ನಿರ್ಣಯವನ್ನು ಅಂಗೀಕರಿಸಿದೆ. ಈ ನಿರ್ಣಯದಂತೆ ನೇಮಕ ಮಾಡಲು ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 227 ಯೋಯೋಕ 2004 ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2005**

ಗಡಿನಾಡು ಅಧ್ಯಯನ ಆಯೋಗದ ವರದಿಯಲ್ಲಿನ 2ನೇ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ ಆಯುಕ್ತಾಲಯದ ನಿರ್ದೇಶಕರನ್ನು ಗಡಿಶಾಲೆಗಳ ಮೇಲ್ವಿಚಾರಕರನ್ನಾಗಿ ಈ ಮೂಲಕ ನೇಮಿಸುತ್ತದೆ.

- ನಾಡಿನ ಎಲ್ಲಾ ಜನರನ್ನು ಅಕ್ಷರಸ್ಥರನ್ನಾಗಿಸಲು ಸರ್ಕಾರವು ರೂಪಿಸಿರುವ ಕಾರ್ಯಕ್ರಮಗಳನ್ನು ರಾಜ್ಯ ಗಡಿಭಾಗಗಳಲ್ಲಿ ತೀವ್ರತೆ ಮತ್ತು ಕ್ರಮ ಬದ್ಧತೆಯಿಂದ ಉತ್ತರಿಸಲು ಅವರು ಈ ಮುಂದಿನ ಕ್ರಮಗಳನ್ನು ಅನುದಾನ ಲಭ್ಯತೆಯಂತೆ ಕೈಗೊಳ್ಳತಕ್ಕದ್ದು.
- ಎರಡು ಭಾಷಾ ಮಾಧ್ಯಮಗಳ ಶಾಲೆಗಳನ್ನು ಹೊಂದಿರುವ ಬೆಳಗಾವಿ, ಉತ್ತರ ಕನ್ನಡ, ಬಳ್ಳಾರಿ ಇತ್ಯಾದಿ ಜಿಲ್ಲೆಗಳಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ ಮಾಧ್ಯಮವನ್ನು ಗಟ್ಟಿಗೊಳಿಸಲು.
- ಗಡಿಭಾಗದ ಮಕ್ಕಳು ನಿರ್ಲಕ್ಷ್ಯಕ್ಕೆ ಒಳಗಾಗದೇ ಶಾಲೆಗೆ ಬರುವಂತೆ ಮಾಡಲು.
- ಗಡಿಭಾಗದ ಶಾಲೆಗಳನ್ನು ಹೆಚ್ಚು ಆಕರ್ಷಕವನ್ನಾಗಿ ಮಾಡುವುದರ ಮೂಲಕ ಮಕ್ಕಳ ಜ್ಞಾನ ವಿಕಾಸಕ್ಕೆ ಕಾರಣವಾಗುವುದು.
- ಗಡಿಭಾಗದ ಕನ್ನಡ ಶಾಲೆಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು.
- ಶಾಲೆಗಳಲ್ಲಿ ನಿರಂತರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುವುದು.
- ಕನ್ನಡದ ಕವಿ, ಕಲಾವಿದರ ಭಾವಚಿತ್ರಗಳನ್ನು ವಿತರಿಸುವುದು.
- ಎಲ್ಲಾ ರೀತಿಯ ಪೀಠೋಪಕರಣಗಳನ್ನು ನೀಡುವುದು.
- ನಿರಂತರ ತಪಾಸಣೆ ನಡೆಸುವ ಮೂಲಕ ಶಿಕ್ಷಣ ಗುಣಮಟ್ಟ ಹೆಚ್ಚಿಸುವುದು.
- ವಿದ್ಯಾರ್ಥಿಗಳು ಹಾಗೂ ಶಿಕ್ಷಕರ ಸಮಸ್ಯೆಗಳಿಗೆ ಸ್ಪಂದಿಸುವುದು.
- ಕಲಿಸುವುದು ಹಾಗೂ ಕಲಿಯುವುದನ್ನು ಆಶಾದಾಯಕ ನೆಲೆಗೆ ತರುವುದು.
- ಗಡೀಭಾಗದ ವಿದ್ಯಾರ್ಥಿವೃಂದಕ್ಕೆ ವಿಶೇಷ ಪ್ರವಾಸ ಏರ್ಪಡಿಸುವ ಮೂಲಕ ಅವರಿಗೆ ಕರ್ನಾಟಕ ದರ್ಶನ ಮಾಡಿಸುವುದು.

- ಶಿಕ್ಷಣ ಇಲಾಖೆಯೊಂದಿಗೆ ಸಮನ್ವಯ ಸಾಧಿಸಿ ಗಡಿನಾಡು ಶಿಕ್ಷಣಕ್ಕೆ ಉತ್ತೇಜಕವಾಗುವುದು.

ಮೇಲಿನಂತೆ ಕ್ರಮಗಳನ್ನು ಕೈಗೊಳ್ಳುವ ಮೂಲಕ ನಿರ್ದೇಶಕರು ಗಡಿ ಪ್ರದೇಶಗಳಲ್ಲಿ ಕನ್ನಡ ಮಾಧ್ಯಮ ಮತ್ತು ಶಿಕ್ಷಣವನ್ನು ವಿಸ್ತರಿಸಲು ಕ್ರಮ ಕೈಗೊಳ್ಳಬೇಕೆಂದು ಸರ್ಕಾರವು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.1176

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಸಹ ಕಾರ್ಯದರ್ಶಿ(ಯೋಜನೆ), ಶಿಕ್ಷಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಮೈಸೂರಿನ ವೈದ್ಯಕೀಯ ಕಾಲೇಜಿನ ಜೀವರಾಯನಕಟ್ಟೆ ಪ್ರದೇಶದ 10 ಸಾವಿರ ಚದರಡಿ ಖಾಲಿ ನಿವೇಶನವನ್ನು ದೇವರಾಜ ಪೊಲೀಸ್‌ಠಾಣೆಯ ಕಟ್ಟಡ ನಿರ್ಮಾಣಕ್ಕಾಗಿ.

**ಓದಲಾಗಿದೆ :**
1. ದಿನಾಂಕ: 19.11.2004 ಸಂಖ್ಯೆ: ಆಕುಕ 199 ಎಂಎಸ್‌ಎಫ್ 2004ರ ಸರ್ಕಾರಿ ಆದೇಶ.
2. ದಿನಾಂಕ: 28.04.2005 ಸಂಖ್ಯೆ: ಸಅಇ 47 ಎಸಿಬಿ, 2005ರ ನಗರಾಭಿವೃದ್ಧಿ ಇಲಾಖೆಯ ಅನಧಿಕೃತ ಟಿಪ್ಪಣಿ.
3. ದಿನಾಂಕ: 21.12.2004 ಸಂಖ್ಯೆ: ಯುಡಿಡಿ:113: ಎಸಿಎಂ 2004ರ ಸರ್ಕಾರಿ ಆದೇಶ.
4. ದಿನಾಂಕ: 26.03.2005 ಸಂಖ್ಯೆ: ಉಮುಮ್ಮೆ 7050 2004-05ರ ಉಪಮುಖ್ಯಮಂತ್ರಿಯವರ ಟಿಪ್ಪಣಿ.
5. ದಿನಾಂಕ: 03.12.2004 ಸಂಖ್ಯೆ: ಕಟ್ಟಡ 67: 2004-05 ಮೈಸೂರು ನಗರ ಪೊಲೀಸ್ ಆಯುಕ್ತರ ಪತ್ರ.
6. ದಿನಾಂಕ: 25.05.2005 ಸಂಖ್ಯೆ: ಆರ್‌ಡಿ 40 ಎಲ್‌ಜಿಎಂ 2005ರ ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ.

**ಪೀಠಿಕೆ:**

1. ಮೈಸೂರು ವೈದ್ಯಕೀಯ ಕಾಲೇಜಿನ ಜೀವರಾಯನಕಟ್ಟೆ ಮೈದಾನವನ್ನು ಮೈಸೂರು ವೈದ್ಯಕೀಯ ಕಾಲೇಜಿನ ಆಸ್ತಿಯೆಂದು ತೀರ್ಮಾನಿಸಿ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ. ಸದರಿ ಆಸ್ತಿಯು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸೇರಿರುವುದರಿಂದ ಮೈಸೂರಿನ ಜೀವರಾಯನಕಟ್ಟೆ ಪ್ರದೇಶದಲ್ಲಿ ದೇವರಾಜ ಪೊಲೀಸ್‌ಠಾಣೆ ನಿರ್ಮಿಸಲು ಖಾಲಿ ನಿವೇಶನವನ್ನು ಒದಗಿಸಲು ಮುಂದಿನ ಕ್ರಮ ಕೈಗೊಳ್ಳುವಂತೆ ನಗರಾಭಿವೃದ್ಧಿ ಇಲಾಖೆಯು ಕೋರಿತ್ತು.

2. ಮೈಸೂರು ನಗರದಲ್ಲಿನ ಜೀವರಾಯನಕಟ್ಟೆ ಮೈದಾನ ಪ್ರದೇಶದ ವ್ಯಾಪ್ತಿಯ ಆಗ್ನೇಯ ದಿಕ್ಕಿನಲ್ಲಿ 10,000 ಚದರಡಿ ಖಾಲಿ ಭೂಮಿಯನ್ನು ದೇವರಾಜ ಪೊಲೀಸ್‌ಠಾಣೆ ಮತ್ತು ದೇವರಾಜ ಸಂಚಾರಿ ಪೊಲೀಸ್ ಠಾಣೆ ಕಟ್ಟಡ ನಿರ್ಮಿಸಲು ಮಂಜೂರಾತಿ ನೀಡಲು ಉಪ ಮುಖ್ಯಮಂತ್ರಿಗಳು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 14.03.2005ರ ಸಭೆ ನಡವಳಿಯಲ್ಲಿ ನಿರ್ಣಯಿಸಲಾಗಿತ್ತು.

3. ದೇವರಾಜ ಪೊಲೀಸ್ ಠಾಣೆ ಹಾಗೂ ಸಂಚಾರಿ ಪೊಲೀಸ್ ಠಾಣೆಗಳಿಗೆ ಕಟ್ಟಡ ನಿರ್ಮಿಸಲು ಜೀವರಾಯನಕಟ್ಟೆ ಮೈದಾನದಲ್ಲಿ 20,700 ಚದರಡಿ ಜಾಗವನ್ನು ವಿತರಿಸುವಂತೆ ಮೈಸೂರು ನಗರ ಪೊಲೀಸ್ ಆಯುಕ್ತರು ಕೋರಿದ್ದಾರೆ.

4. ವೈದ್ಯಕೀಯ ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿರುವ ಮೈಸೂರಿನ ಜೀವರಾಯನಕಟ್ಟೆ ಪ್ರದೇಶದ ಆಗ್ನೇಯ ದಿಕ್ಕಿನಲ್ಲಿರುವ 10,000 ಚದರಡಿ ಖಾಲಿ ನಿವೇಶನವನ್ನು ದೇವರಾಜ ಪೊಲೀಸ್ ಠಾಣೆ ಕಟ್ಟಡಗಳನ್ನು ನಿರ್ಮಿಸುವ ಸಲುವಾಗಿ ಪೊಲೀಸ್ ಇಲಾಖೆಗೆ ವರ್ಗಾಯಿಸುವುದನ್ನು ಕಂದಾಯ ಇಲಾಖೆಯ ಸಮಾಲೋಚನೆಯೊಂದಿಗೆ ಪರಿಶೀಲಿಸಲಾಗಿದೆ.

5. ಮೇಲ್ಕಂಡ ಹಿನ್ನೆಲೆಯಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿರುವ ಮೈಸೂರು ವೈದ್ಯಕೀಯ ಕಾಲೇಜಿಗೆ ಸಂಬಂಧಿಸಿದ ಜೀವರಾಯನಕಟ್ಟೆ ಪ್ರದೇಶದ ಆಗ್ನೇಯ ದಿಕ್ಕಿನಲ್ಲಿರುವ 10,000 ಚದರಡಿ ಖಾಲಿ ನಿವೇಶನವನ್ನು ಮೈಸೂರಿನ ದೇವರಾಜ ಪೊಲೀಸ್ ಠಾಣೆ ಕಟ್ಟಡಗಳನ್ನು ನಿರ್ಮಿಸುವ ಸಲುವಾಗಿ ಪೊಲೀಸ್ ಇಲಾಖೆಗೆ ವರ್ಗಾಯಿಸಲು ಸರ್ಕಾರ ತೀರ್ಮಾನಿಸಿದೆ

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 199 ಎಂಎಸ್‌ಎಫ್ 2004, ಬೆಂಗಳೂರು, ದಿನಾಂಕ: 13ನೇ ಜೂನ್ 2005**

6. ವೈದ್ಯಕೀಯ ಶಿಕ್ಷಣ ಇಲಾಖೆಯ ಮೈಸೂರು ವೈದ್ಯಕೀಯ ಕಾಲೇಜಿನ ಜೀವರಾಯನಕಟ್ಟೆ ಪ್ರದೇಶದ ಆಗ್ನೇಯ ದಿಕ್ಕಿನಲ್ಲಿರುವ ಹತ್ತುಸಾವಿರ ಚದರಡಿ ಖಾಲಿ ನಿವೇಶನವನ್ನು ದೇವರಾಜ ಪೊಲೀಸ್‌ಠಾಣೆಯ ಕಟ್ಟಡ ನಿರ್ಮಾಣದ ಸಲುವಾಗಿ ಪೊಲೀಸ್ ಇಲಾಖೆಗೆ ವರ್ಗಾಯಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1178

**ಡಿ. ವಿ. ಪ್ರಸಾದ್**

ಸರ್ಕಾರದ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

## ಕಂದಾಯ ಸಚಿವಾಲಯ

**ವಿಷಯ :** ಮಿತವೇತನ (ಸ್ಟೈಫೆಂಡರಿ) ಗ್ರಾಮಸಹಾಯಕರ ಸೇವೆಯನ್ನು ದಿನಾಂಕ: 1.4.2005 ರಿಂದ 31.03.2006 ರವರೆಗೆ ಮುಂದುವರೆಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 3 ಎಂವಿಎಸ್: 77: ದಿನಾಂಕ: 16.09.1978.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 82 ಎಂವಿಎಸ್: (1)82, ದಿನಾಂಕ: 23.09.1982.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 220 ಎಂವಿಎಸ್: 91: ದಿನಾಂಕ: 31.10.1991.
4. ಸರ್ಕಾರದ ಆದೇಶ ಸಂಖ್ಯೆ: ಕಂಇ 258 ಎಂವಿಎಸ್: 93: ದಿನಾಂಕ: 28.01.1994.
5. ಸರ್ಕಾರದ ಆದೇಶ ಸಂಖ್ಯೆ: ಕಂಇ 201 ಎಂವಿಎಸ್: 96: ದಿನಾಂಕ: 30.10.1996.
6. ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂವಿಎಸ್: 97: ದಿನಾಂಕ: 27.03.1997.
7. ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂವಿಎಸ್: 97: ದಿನಾಂಕ: 31.07.1997.

8. ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂವಿಎಸ್: 97(ಭಾಗ): ದಿನಾಂಕ: 31.12.1997.
9. ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂವಿಎಸ್: 97(ಭಾಗ): ದಿನಾಂಕ: 08.07.1998.
10. ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂವಿಎಸ್: 97(ಭಾಗ): ದಿನಾಂಕ: 06.01.1999.
11. ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂವಿಎಸ್: 97(ಭಾಗ): ದಿನಾಂಕ: 06.05.1999.
12. ಸರ್ಕಾರದ ಆದೇಶ ಸಂಖ್ಯೆ: ಕಂಇ 10 ಬಿಎಸ್‌ಸಿ: 2000, ದಿನಾಂಕ: 16.08.2000.
13. ಸರ್ಕಾರದ ಆದೇಶ ಸಂಖ್ಯೆ: ಕಂಇ 250 ಬಿಎಸ್‌ಸಿ: 2001, ದಿನಾಂಕ: 04.12.2001.
14. ಸರ್ಕಾರದ ಆದೇಶ ಸಂಖ್ಯೆ: ಕಂಇ 272 ಬಿಎಸ್‌ಸಿ: 2002, ದಿನಾಂಕ: 30.11.2002.
15. ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಬಿಎಸ್‌ಸಿ: 2003, ದಿನಾಂಕ: 28.08.2003.
16. ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಬಿಎಸ್‌ಸಿ: 2003, ದಿನಾಂಕ: 24.07.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1) ಮತ್ತು (2)ರಲ್ಲಿನ ಆದೇಶಗಳಲ್ಲಿ ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ 10450 ಗ್ರಾಮಸಹಾಯಕರನ್ನು ಮಿತವೇತನ (ಸ್ಟೈಪೆಂಡರಿ) ಹುದ್ದೆಗಳ ಆಧಾರದ ಮೇಲೆ 1978ನೇ ಸಾಲಿನಿಂದ ಹಾಗೂ ನಂತರದಿಂದ ಸದರಿ ಆದೇಶಗಳಲ್ಲಿನ ಷರತ್ತುಗಳಿಗೆ ಒಳಪಟ್ಟು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬಂದಿದ್ದು, ತದನಂತರ ಕೊನೆಯದಾಗಿ ಸದರಿ ಗ್ರಾಮಸಹಾಯಕರುಗಳ ಸೇವೆಯು ಅಗತ್ಯತೆಯನ್ನು ಪರಿಗಣಿಸಿ, ಮಾಸಿಕ ನಿಗದಿತ ಸಂಭಾವನೆ ರೂ.1000/-ರ ಮೇರೆಗೆ ಮೇಲೆ ಓದಲಾದ ಕ್ರಮಸಂಖ್ಯೆ (16)ರಲ್ಲಿನ ಆದೇಶದಲ್ಲಿ ದಿನಾಂಕ: 1.4.2004 ರಿಂದ ದಿನಾಂಕ: 31.3.2005 ರವರೆಗೆ ಮುಂದುವರಿಸಲಾಗಿತ್ತು.

ಗ್ರಾಮಸಹಾಯಕರ ಸೇವೆಯು ಅಗತ್ಯತೆಯನ್ನು ಸರ್ಕಾರ ಪರಿಶೀಲಿಸಿ ಈ 10450 ಗ್ರಾಮಸಹಾಯಕರ ಹುದ್ದೆಗಳನ್ನು ಕಂದಾಯ ಇಲಾಖೆಯಿಂದ ಸಂಪೂರ್ಣ ಅವಲೋಕನೆಗೆ ಒಳಪಟ್ಟು ದಿನಾಂಕ: 1.04.05 ರಿಂದ 31.03.06 ರವರೆಗೆ (ಒಂದು ವರ್ಷದ ಅವಧಿಗೆ) ಸಂಭಾವನೆಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ರೂ.1000/- ದಿಂದ ರೂ.2000/-ಗಳವರೆಗೆ ಜಾರಿಗೆ ಬರುವಂತೆ ಹೆಚ್ಚಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 1 ಬಿಎಸ್‌ಸಿ 2005, ಬೆಂಗಳೂರು ದಿನಾಂಕ: 8ನೇ ಆಗಸ್ಟ್ 2005**

ಕಂದಾಯ ಇಲಾಖೆಯಲ್ಲಿ ಅನುಬಂಧದಲ್ಲಿರುವ ಮಿತವೇತನ (ಸ್ಟೈಫೆಂಡರಿ) ಗ್ರಾಮಸಹಾಯಕರುಗಳ ಹುದ್ದೆಗಳನ್ನು ದಿನಾಂಕ: 1.04.2005 ರಿಂದ 31.03.2006 ರವರೆಗೆ ಮಾತ್ರ ಮೇಲೆ ಓದಲಾದ ಕ್ರಮಸಂಖ್ಯೆ (1) ಮತ್ತು (3)ರ ಆದೇಶದಲ್ಲಿರುವ ಷರತ್ತುಗಳಿಗೊಳಪಟ್ಟು ಮುಂದುವರೆಸಿ ಆದೇಶಿಸಲಾಗಿದೆ. ಈಗ ನೀಡುತ್ತಿರುವ ಮಾಸಿಕ ಸಂಭಾವನೆಯನ್ನು ರೂಪಾಯಿ 1000/- ದಿಂದ ರೂಪಾಯಿ 2000/- (ರೂಪಾಯಿ ಎರಡು ಸಾವಿರ ಮಾತ್ರ) ವರೆಗೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಹೆಚ್ಚಿಸಲಾಗಿದೆ.

ಮೇಲ್ಕಂಡ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2029-00-101-1-01-015 Subsidiary expenses in (SE-I)ರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ: 737 ವೆಚ್ಚ-7/05 ದಿನಾಂಕ: 4.8.2005ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಪರಿಹಾರ ಮತ್ತು ಸೇವೆಗಳು-2).

**ಸರ್ಕಾರದ ಆದೇಶ ಸಂಖ್ಯೆ: ಕಂಇ 1 ಬಿಎಸ್‌ಸಿ 2005 ದಿನಾಂಕ: 8ನೇ ಆಗಸ್ಟ್ 2005ಕ್ಕೆ ಅನುಬಂಧ**

| ಕ್ರ.ಸಂ. | ಜಿಲ್ಲೆಯ ಹೆಸರು | ಮಂಜೂರಾಗಿರುವ ಗ್ರಾಮ ಸಹಾಯಕರ ಹುದ್ದೆಗಳು |
|---|---|---|
| 1. | ಬೆಂಗಳೂರು | 710 |
| 2. | ಕೋಲಾರ | 610 |
| 3. | ಚಿತ್ರದುರ್ಗ | 520 |
| 4. | ತುಮಕೂರು | 660 |
| 5. | ಶಿವಮೊಗ್ಗ | 550 |
| 6. | ಮೈಸೂರು | 750 |
| 7. | ಮಂಡ್ಯ | 500 |
| 8. | ಹಾಸನ | 470 |
| 9. | ಚಿಕ್ಕಮಗಳೂರು | 330 |
| 10. | ದಕ್ಷಿಣಕನ್ನಡ ಜಿಲ್ಲೆ | 570 |
| 11. | ಕೊಡಗು | 140 |
| 12. | ಬೆಳಗಾಂ | 740 |
| 13. | ಧಾರವಾಡ | 800 |
| 14. | ಉತ್ತರಕನ್ನಡ | 400 |
| 15. | ಬಿಜಾಪುರ | 700 |
| 16. | ಗುಲ್ಬರ್ಗಾ | 650 |
| 17. | ಬಳ್ಳಾರಿ | 450 |
| 18. | ಬೀದರ್ | 350 |

| ಕ್ರ.ಸಂ. | ಜಿಲ್ಲೆಯ ಹೆಸರು | ಮಂಜೂರಾಗಿರುವ ಗ್ರಾಮ ಸಹಾಯಕರ ಹುದ್ದೆಗಳು |
|---|---|---|
| 19. | ರಾಯಚೂರು | 550 |
| 20. | ಹಾವೇರಿ | * |
| 21. | ಗದಗ್ | * |
| 22. | ಬಾಗಲಕೋಟೆ | * |
| 23. | ದಾವಣಗೆರೆ | * |
| 24. | ಚಾಮರಾಜನಗರ | * |
| 25. | ಕೊಪ್ಪಳ | * |
| 26. | ಉಡುಪಿ | * |
| 27. | ಬೆಂಗಳೂರು ಗ್ರಾಮಾಂತರ ಜಿಲ್ಲೆ | * |

* ಈ ಜಿಲ್ಲೆಗಳಿಗೆ ಮೇಲ್ಕಂಡ ಒಟ್ಟು 10450 ಹುದ್ದೆಗಳಲ್ಲಿ ಮರು ವಿಂಗಡಣೆ ಮಾಡಿ ಹಂಚಿಕೆಯಾಗಿರುವ ಹುದ್ದೆಗಳು ಸೇರಿರುತ್ತವೆ.

**ಎಂ. ಎಸ್. ದೇಸಾಯಿ**
ಪಿ.ಆರ್.1181 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಪರಿಹಾರ ಮತ್ತು ಸೇವೆಗಳು-2).

**ವಿಷಯ :** ಶ್ರೀ ಆರ್. ಎ. ಪಾಟೀಲ್, ತಹಸೀಲ್ದಾರ್, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 4.8.2005ರ ಬೆಳಗಾಂ ಜಿಲ್ಲಾಧಿಕಾರಿಗಳ ಅ.ಸ.ಪತ್ರ ಸಂಖ್ಯೆ: ಎಬಿಎಫ್ಎಲ್: ಸಿಆರ್:15/2005-2006.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆಯ ಅಥಣಿ ತಾಲ್ಲೂಕಿನ ತಹಸೀಲ್ದಾರರಾದ ಶ್ರೀ ಆರ್. ಎ. ಪಾಟೀಲ್ ಇವರು ಪ್ರವಾಹಪೀಡಿತ ಪ್ರದೇಶಗಳಿಗೆ ಭೇಟಿ ನೀಡಲು ವಿಫಲರಾಗಿದ್ದು, ತಮ್ಮ ಕಛೇರಿಯ ಸಿಬ್ಬಂದಿಯಾದ ಕಂದಾಯ ನಿರೀಕ್ಷಕರು ಹಾಗೂ ಗ್ರಾಮಲೆಕ್ಕಿಗರನ್ನು ಸದರಿ ತಾಲ್ಲೂಕಿನ ಸವದತ್ತಿ, ಬಂಜರವಾಡ, ಶೇಗುಣಶಿ, ಮುಳವಾಡ, ಕುಸನಾಳ ಮುಂತಾದ ಗ್ರಾಮಗಳ ಪ್ರವಾಹ ಪರಿಸ್ಥಿತಿ ಮಾಹಿತಿ ಅರಿಯಲು ಹಾಗೂ ಅವಶ್ಯಕ ಪರಿಹಾರ ಒದಗಿಸಲು ಅವರುಗಳ ಸೇವೆಯನ್ನು ಪಡೆಯುವಲ್ಲಿ ವಿಫಲರಾಗಿರುತ್ತಾರೆಂದು ಮೇಲೆ ಓದಲಾದ ದಿನಾಂಕ: 4.8.2005ರ ಪತ್ರದಲ್ಲಿ ಬೆಳಗಾಂ ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ.

ಅಲ್ಲದೆ, ದಿನಾಂಕ: 29.07.2005 ರಂದು ಬೆಳಗಾಂ ಜಿಲ್ಲಾಧಿಕಾರಿಗಳು ಅಥಣಿಗೆ ಭೇಟಿ ನೀಡಿದಾಗ ಪತ್ರಕರ್ತರು ಹಾಗೂ ದೂರು ಸಲ್ಲಿಸಲು ಬಂದ ಸಾರ್ವಜನಿಕರ ಸಮಕ್ಷಮದಲ್ಲಿ ಸದರಿ ತಾಲ್ಲೂಕಿನ ತಹಸೀಲ್ದಾರರಿಗೆ ಸೂಕ್ತ ನಿರ್ದೇಶನಗಳನ್ನು ನೀಡಿ ಪ್ರವಾಹಪೀಡಿತ ಜನರನ್ನು ಹಾಗೂ ಸಾಮಗ್ರಿಗಳನ್ನು ಸಾಗಿಸಲು ಅವಶ್ಯವಾದ ವಾಹನಗಳನ್ನು ಕ್ರೋಢೀಕರಿಸಲು ಸ್ಪಷ್ಟವಾಗಿ ಸೂಚಿಸಿದ್ದರೂ ಸಹ ಅದನ್ನು ಕಾರ್ಯಗತಗೊಳಿಸುವಲ್ಲಿ ತಹಸೀಲ್ದಾರರಾದ ಶ್ರೀ ಆರ್. ಎ. ಪಾಟೀಲ್ ರವರು ವಿಫಲರಾಗಿರುತ್ತಾರೆಂದೂ ಹಾಗೂ ಪ್ರವಾಹ ಪೀಡಿತ ಸಂಕ್ರಹಟ್ಟಿ ಗ್ರಾಮದಲ್ಲಿ ಒಂದು ಗೋಶಾಲೆಯನ್ನು ತೆರೆದು ಸಾರ್ವಜನಿಕರು ಜಾನುವಾರುಗಳಿಗೆ ದಾನವಾಗಿ ನೀಡಿದ ಮೇವನ್ನು ವಿತರಿಸುವ ಕಾರ್ಯವನ್ನು ಕೈಗೊಳ್ಳುವಂತೆ ಪಶುಸಂಗೋಪನಾ ಇಲಾಖೆಯ ಉಪ ನಿರ್ದೇಶಕರು ಅಥಣಿ ತಾಲ್ಲೂಕಿನ ತಹಸೀಲ್ದಾರರನ್ನು ವಿನಂತಿಸಿದ್ದರೂ ಸಹ ಸದರಿ ತಹಸೀಲ್ದಾರರಾಗಲೀ ಅಥವಾ ಅವರ ಕಛೇರಿಯ ಸಿಬ್ಬಂದಿಯಾಗಲೀ ಗೋಶಾಲೆಗೆ ಭೇಟಿ ನೀಡಿರುವುದಿಲ್ಲವೆಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಅಥಣಿ ತಾಲ್ಲೂಕಿನ ತಹಸೀಲ್ದಾರರಾದ ಶ್ರೀ ಆರ್. ಎ. ಪಾಟೀಲ್ ಇವರು ಇಂದಿನ ಕ್ಲಿಷ್ಟ ಸನ್ನಿವೇಶದಲ್ಲಿ ಕಾರ್ಯನಿರ್ವಾಹಕ ಕೆಲಸಗಳನ್ನು (Executive Work) ಯಶಸ್ವಿಯಾಗಿ ನಿರ್ವಹಿಸಲು ಸಂಪೂರ್ಣವಾಗಿ ಅಸಮರ್ಥರಾಗಿರುತ್ತಾರೆಂದು ಹಾಗೂ ಪ್ರವಾಹ ಇಳಿದ ನಂತರ ಆ ಬಗ್ಗೆ ಕೈಗೊಳ್ಳಬೇಕಾದ ಕೆಲಸಗಳನ್ನು ನಿರ್ವಹಿಸಲು ಇವರಿಂದ ಸಾಧ್ಯವಿರುವುದಿಲ್ಲವಾದ್ದರಿಂದ ಇವರ ಈ ಕರ್ತವ್ಯಚ್ಯುತಿಗಾಗಿ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವುದನ್ನು ಕಾಯ್ದಿರಿಸಿ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವುದು ಸೂಕ್ತವೆಂದು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 39 ಎಡಿಇ 2005, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ವಿವರಿಸಿರುವ ಹಿನ್ನೆಲೆಯಲ್ಲಿ ಅಥಣಿ ತಾಲ್ಲೂಕಿನ ತಹಸೀಲ್ದಾರರಾದ ಶ್ರೀ ಆರ್. ಎ. ಪಾಟೀಲ್ ಇವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಬೆಳಗಾಂ ಜಿಲ್ಲಾಧಿಕಾರಿಗಳ ಪೂರ್ವಾನುಮತಿಯನ್ನು ಪಡೆಯದೇ ಕೇಂದ್ರಸ್ಥಾನ ಬಿಡತಕ್ಕದಲ್ಲ. ಹಾಗೂ ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಸ್. ಮಹಂತೇಶಯ್ಯ**
ಪಿ.ಆರ್.1182 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಸೇವೆಗಳು-3).

## ಯೋಜನೆ ಹಾಗೂ ಸಾಂಖ್ಯಿಕ ಸಚಿವಾಲಯ

**ವಿಷಯ :** ಶ್ರೀ ಎಂ. ವಿಜಯೇಂದ್ರ ಬಾಬು, ಉಪ ನಿರ್ದೇಶಕರು, (ಹಿಂದಿನ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು (ಗ್ರಾ), ಇವರು 1998-99ನೇ ಸಾಲಿನಲ್ಲಿ ಬಿಡುಗಡೆಯಾದ 4ನೇ ಆರ್ಥಿಕ ಗಣತಿಯ ಸಂಭಾವನೆ ಹಾಗೂ ಸಾಕ್ಷರತಾ ವೆಚ್ಚ ಇತ್ಯಾದಿಗಳಿಗೆ ಸಂಬಂಧಿಸಿದಂತೆ ವಾಸ್ತವ ವೆಚ್ಚ ಮಾಡಿದ ಹಣಕ್ಕೆ ವೋಚರ್‌ಗಳನ್ನು ಸಲ್ಲಿಸದೇ ಇರುವ ಬಗ್ಗೆ.

**ಓದಲಾಗಿದೆ :**
1. ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ರವರ ಪತ್ರ ಸಂಖ್ಯೆ: ಡಿಇಎಸ್: 65: ಎಡಿಎಂ(3) 2001, ದಿನಾಂಕ: 16.09.2005.
2. ಸರ್ಕಾರದ ನೋಟೀಸ್ ಸಂಖ್ಯೆ: ಪಿಡಿಎಸ್ 135 ಎಸ್‌ಎಸ್‌ಎಂ: 2002, ದಿನಾಂಕ: 24.03.2005.
3. ಶ್ರೀ ಎಂ. ವಿಜಯೇಂದ್ರ ಬಾಬು, ಉಪ ನಿರ್ದೇಶಕರು, ಹೆಚ್‌ಡಿಡಿ, ಯೋಜನಾ ಇಲಾಖೆ, ಇವರ ರಕ್ಷಣಾ ಹೇಳಿಕೆ ದಿನಾಂಕ: 04.05.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ರವರು ದಿನಾಂಕ: 16.09.2002ರ ಪತ್ರದಲ್ಲಿ ಶ್ರೀ ಎಂ. ವಿಜಯೇಂದ್ರ ಬಾಬು, ಉಪ ನಿರ್ದೇಶಕರು (ಹಿಂದಿನ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ, ಬೆಂಗಳೂರು (ಗ್ರಾಮಾಂತರ), ಇವರು 1998-99ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಲ್ಲಿ ಪ್ರತಿಶತ 100 ರಂತೆ ಆರ್ಥಿಕ ಸಹಾಯವನ್ನು 4ನೇ ಆರ್ಥಿಕ ಗಣತಿಗೆ ಮಂಜೂರು ಮಾಡಿದ್ದು, ಈ ಗಣತಿ ಕಾರ್ಯವು 2000ನೇ ಸಾಲಿನಲ್ಲಿ ಮುಕ್ತಾಯವಾಗಿರುವುದಾಗಿಯೂ, ಗಣತಿ ಕಾರ್ಯದ ಬಗ್ಗೆ ಸಮೀಕ್ಷೆ ನಡೆಸಿ ಉಳಿಕೆ ಮೊತ್ತವನ್ನು ಕೇಂದ್ರ ಸಾಂಖ್ಯಿಕ ಆಯೋಗಕ್ಕೆ ಹಿಂದಿರುಗಿಸಬೇಕಾಗಿದ್ದು, ಈ ಬಗ್ಗೆ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ವಾಸ್ತವವಾಗಿ ಹಣವನ್ನು ಉಪಯೋಗಿಸಿಕೊಂಡ ಬಗ್ಗೆ ವೋಚರ್‌ಗಳನ್ನು ಅಥವಾ ಸಾಕ್ಷರತಾ ದರದ ಹಣವನ್ನು ವಿತರಿಸಿದ ಬಗ್ಗೆ ಯಾವುದೇ ರೀತಿಯ ದಾಖಲೆಗಳು ಲಭ್ಯವಿರದ ಕಾರಣ, ಈ ಹಿಂದೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳಾಗಿದ್ದ ಶ್ರೀ ಎಂ. ವಿಜಯೇಂದ್ರಬಾಬು, ಉಪ ನಿರ್ದೇಶಕರು, ಇವರಿಗೆ ವೋಚರ್‌ಗಳನ್ನು ಸಲ್ಲಿಸುವಂತೆ ಹಲವಾರು ಬಾರಿ ನೆನಪೋಲೆಗಳನ್ನು ಕಳುಹಿಸಿದ್ದರೂ, ಸದರಿ ಅಧಿಕಾರಿಯವರು ವೋಚರ್‌ಗಳನ್ನು ಸಲ್ಲಿಸದೇ ಇರುವ ಕಾರಣ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸಿಬ್ಬಂದಿಗಳಿಂದ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯ ಲೆಕ್ಕ ಶಾಖೆಯ ತಪಾಸಣೆ ನಡೆಸಿರುವುದಾಗಿಯೂ, ಆದುದರಿಂದ ಸದರಿ ಅಧಿಕಾರಿಯವರಿಗೆ ಸರ್ಕಾರದ ಹಂತದಲ್ಲಿ ವೋಚರುಗಳನ್ನು ಸಲ್ಲಿಸುವಂತೆ ಸೂಚನೆ ನೀಡುವಂತೆಯೂ ಹಾಗೂ ಈ ಸಂಬಂಧ ಪ್ರತ್ಯೇಕವಾಗಿ ಮಹಾಲೇಖಪಾಲರು, ಬೆಂಗಳೂರು, ಇವರಿಂದ ತಪಾಸಣೆ ನಡೆಸಲು ಸೂಚನೆ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (2) ಕಾರಣ ಕೇಳುವ ನೋಟೀಸ್‌ನಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 11ರ ಮೇರೆಗೆ ಕಾರಣ ಕೇಳುವ ನೋಟೀಸನ್ನು ಶ್ರೀ ಎಂ. ವಿಜಯೇಂದ್ರ ಬಾಬು, ಉಪ ನಿರ್ದೇಶಕರು, ಇವರಿಗೆ ದಿನಾಂಕ: 24.03.2005 ರಂದು ಅಂಚೆ ಮೂಲಕ ರವಾನಿಸಲಾಯಿತು.

ಮೇಲೆ ಓದಲಾದ (3)ರ ದಿನಾಂಕ: 04.05.2005ರ ಪತ್ರದಲ್ಲಿ ಶ್ರೀ ಎಂ. ವಿಜಯೇಂದ್ರ ಬಾಬು, ಉಪ ನಿರ್ದೇಶಕರು, ಅವರ ಸಮಜಾಯಿಸಿಯಲ್ಲಿ ಅವರ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿದ್ದಾರೆ. ಹಾಗೂ ಈ ಬಗ್ಗೆ ತಮ್ಮ ಮೇಲಿರುವ ಆರೋಪಗಳನ್ನು ಖುಲಾಸೆ ಮಾಡಬೇಕೆಂದು ಕೋರಿರುತ್ತಾರೆ.

ಸದರಿ ಅಧಿಕಾರಿಯು ನೀಡಿರುವ ಉತ್ತರವು ಸಮರ್ಪಕವಾಗಿಲ್ಲವೆಂಬುದನ್ನು ಮನಗಂಡು ಈ ಆರೋಪಗಳ ಬಗ್ಗೆ ಸತ್ಯಾ-ಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಸರ್ಕಾರವು ವಿವರವಾದ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿಎಸ್ 135 ಎಸ್‌ಎಸ್‌ಎಂ 2002, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 11ನೇ ನಿಯಮದ ಉಪ ನಿಯಮ (5) (ಎ) ಅನ್ನು ಓದಿಕೊಂಡಂತೆ 3ನೇ ಉಪ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ವಿಜಯೇಂದ್ರ ಬಾಬು, ಉಪ ನಿರ್ದೇಶಕರು, ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಸದರಿ ನಿಯಮಗಳ 11ನೇ ನಿಯಮಾನುಸಾರ ವಿಚಾರಣೆಯನ್ನು ನಡೆಸಲು ಶ್ರೀ ಎಚ್. ಇ. ರಾಜಶೇಖರಪ್ಪ, ಜಂಟಿ ನಿರ್ದೇಶಕರು (ಸಾಂಖ್ಯಿಕ), ಪಶುಸಂಗೋಪನೆ ಹಾಗೂ ಪಶುಪಾಲನೆ ಇಲಾಖೆ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ಸರ್ಕಾರವು ನೇಮಿಸಿದೆ.

ಈ ವಿಚಾರಣೆಯಲ್ಲಿ ಸರ್ಕಾರದ ಪರವಾಗಿ ಈ ಪ್ರಕರಣವನ್ನು ವಿಚಾರಣಾ ಪ್ರಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ 11ನೇ ನಿಯಮದ (5)ನೇ ಉಪ ನಿಯಮದ (ಸಿ) ಖಂಡದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್. ನಂಜುಂಡರಾವ್, ಜಂಟಿ ನಿರ್ದೇಶಕರು, ಕೃಷಿ ಅಂಕಿ ಅಂಶ ವಿಭಾಗ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕೇಂದ್ರ ಕಚೇರಿ, ಇವರನ್ನು ಈ ಮೂಲಕ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ವಿಚಾರಣಾ ವರದಿಯನ್ನು ಈ ಆದೇಶ ಹೊರಡಿಸಿದ ಮೂರು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ವಿಚಾರಣೆಗಾಗಿ ನೇಮಿಸಿರುವ ವಿಚಾರಣಾಧಿಕಾರಿಗಳಿಗೆ ಸಂಭಾವನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.04.1998ರ ಆದೇಶದನ್ವಯ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶಿವಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ.

ಪಿ.ಆರ್.1183

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕಾವೇರಿ ನದಿ ನೀರಿನ ಹಂಚಿಕೆಯ ಬಗೆಗಿನ ಕಾನೂನು ಇಲಾಖೆಯಲ್ಲಿನ ಕಾನೂನು ಹಾಗೂ ತಾಂತ್ರಿಕ ಕೋಶದ ಮುಂದುವರಿಕೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 90 ದಿನಾಂಕ: 28.8.1990.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 39 ಸಸಿವಿ 2001 ದಿನಾಂಕ: 1.9.2001.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 74 ಸಸಿವಿ 2003 ದಿನಾಂಕ: 2.9.2003.
4. ಅನಧಿಕೃತ ಟಿಪ್ಪಣಿ ಸಂಖ್ಯೆ: ಲಾ 30 ಎಲ್‌ಎಸಿ 2004 ದಿನಾಂಕ: 14.9.2004.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 81 ಸಸಿವಿ 2004 ದಿನಾಂಕ: 19.11.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕಾವೇರಿ ಜಲ ವಿವಾದದ ಬಗ್ಗೆ ಹಿಂದಿನ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆಯಲ್ಲಿ ಒಂದು "ಕಾನೂನು ಮತ್ತು ತಾಂತ್ರಿಕ ಕೋಶ"ವನ್ನು ಕೆಳಕಂಡ ಹುದ್ದೆಗಳೊಡನೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು.

| | | |
|---|---|---|
| 1. | ಸರ್ಕಾರದ ಅಪರ ಕಾರ್ಯದರ್ಶಿ | 1 ಹುದ್ದೆ |
| 2. | ಸರ್ಕಾರದ ಉಪಕಾರ್ಯದರ್ಶಿ | 1 ಹುದ್ದೆ |
| 3. | ಶಾಖಾಧಿಕಾರಿ | 1 ಹುದ್ದೆ |
| 4. | ಹಿರಿಯ ಸಹಾಯಕರು | 1 ಹುದ್ದೆ |
| 5. | ಸಹಾಯಕರು | 1 ಹುದ್ದೆ |
| 6. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 7. | ಕಿರಿಯ ಸಹಾಯಕರು | 1 ಹುದ್ದೆ |
| 8. | ಬೆರಳಚ್ಚುಗಾರರು | 2 ಹುದ್ದೆ |
| 9. | ದಲಾಯತ್ | 1 ಹುದ್ದೆ |
| | **ಒಟ್ಟು** | **11 ಹುದ್ದೆಗಳು** |

ಅದೇ ಆದೇಶದಲ್ಲಿ ಅಡ್ವೊಕೇಟ್ ಜನರಲ್ ರವರ ಆಪ್ತ ಸಿಬ್ಬಂದಿ ಶಾಖೆಗೆ ಒಂದು ಶೀಘ್ರಲಿಪಿಗಾರರ ಹುದ್ದೆಯನ್ನು ಸಹ ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು.

ಕ್ರಮ ಸಂಖ್ಯೆ: (2) ರಲ್ಲಿನ ಸರ್ಕಾರಿ ಆದೇಶದಲ್ಲಿ ಕಿರಿಯ ಸಹಾಯಕರ ಹುದ್ದೆಯನ್ನು ಹೊರತುಪಡಿಸಿ ಉಳಿದ ಹುದ್ದೆಗಳನ್ನು ಮುಂದುವರಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 28.8.2003 ರಿಂದ ಒಂದು ವರ್ಷ ಮುಂದುವರೆಸಲಾಗಿರುತ್ತದೆ. ಸರ್ಕಾರದ ಅಪರ ಕಾರ್ಯದರ್ಶಿ ಮತ್ತು 1 ಶೀಘ್ರಲಿಪಿಗಾರರ ಹುದ್ದೆ ಹೊರತುಪಡಿಸಿ ಉಳಿದ 9 ಹುದ್ದೆಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: 5ರ ಆದೇಶದಲ್ಲಿ ದಿನಾಂಕ: 28.8.2005 ರವರೆಗೆ ಮುಂದುವರೆಸಲಾಗಿದೆ.

ಕಾನೂನು ಇಲಾಖೆಯು ದಿನಾಂಕ: 11.8.2005ರ ಅನಧಿಕೃತ ಟಿಪ್ಪಣಿಯಲ್ಲಿ ವಿವರಿಸಿದ ಕಾರಣಗಳಿಗಾಗಿ ಈ ಹಿಂದೆ ಮುಂದುವರಿಸದೇ ಇರುವ ಸರ್ಕಾರದ ಅಪರ ಕಾರ್ಯದರ್ಶಿ ಹಾಗೂ ಒಂದು ಶೀಘ್ರಲಿಪಿಗಾರರ ಹುದ್ದೆ ಸೇರಿಸಿಕೊಂಡು ಒಟ್ಟು ಎಲ್ಲಾ 11 ಹುದ್ದೆಗಳನ್ನು ದಿನಾಂಕ: 29.8.2005 ರಿಂದ ಒಂದು ವರ್ಷದ ಅವಧಿಗೆ ಅಥವಾ ಕಾವೇರಿ ಜಲ ವಿವಾದವು ನ್ಯಾಯಾಧಿಕರಣದಲ್ಲಿ ಮುಕ್ತಾಯಗೊಳ್ಳುವವರೆಗೆ ಮುಂದುವರಿಸಲು ಕೋರಿರುತ್ತಾರೆ. ಹಾಗೂ ಈ ಕೋಶವನ್ನು "ಅಂತರ ಜಲ ವಿವಾದ" ಕೋಶವೆಂದು ಪುನರ್ ಪದನಾಮೀಕರಿಸಲು ಕೋರಿರುತ್ತದೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 52 ಸಸಿವಿ 2005 ಬೆಂಗಳೂರು, ದಿನಾಂಕ: 8ನೇ ಆಗಸ್ಟ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು ಇಲಾಖೆಯಲ್ಲಿ ಕಾವೇರಿ ಜಲವಿವಾದಕ್ಕೆ ಸಂಬಂಧಿಸಿದಂತೆ ಸೃಜಿಸಲಾದ ಕಾನೂನು ಮತ್ತು ತಾಂತ್ರಿಕ ಕೋಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 29.8.2005 ರಿಂದ ಒಂದು ವರ್ಷದ ಅವಧಿಗೆ ಅಥವಾ ಕಾವೇರಿ ಜಲವಿವಾದವು ನ್ಯಾಯಾಧೀಕರಣದಲ್ಲಿ ಮುಕ್ತಾಯಗೊಳ್ಳುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ ಹಾಗೂ ಸದರಿ ಕೋಶವನ್ನು "ಅಂತರ ಜಲ ವಿವಾದ" ಕೋಶವೆಂದು ಪುನರ್ ಪದನಾಮೀಕರಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಪರ ಕಾರ್ಯದರ್ಶಿ | 1 ಹುದ್ದೆ |
| 2. | ಸರ್ಕಾರದ ಉಪಕಾರ್ಯದರ್ಶಿ | 1 ಹುದ್ದೆ |
| 3. | ಶಾಖಾಧಿಕಾರಿ | 1 ಹುದ್ದೆ |
| 4. | ಹಿರಿಯ ಸಹಾಯಕರು | 2 ಹುದ್ದೆಗಳು |
| 5. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 6. | ಬೆರಳಚ್ಚುಗಾರರು | 2 ಹುದ್ದೆಗಳು |
| 7. | ದಲಾಯತ್ | 1 ಹುದ್ದೆ |
| | **ಒಟ್ಟು** | **10 ಹುದ್ದೆಗಳು** |
| 1. | ಅಡ್ವೊಕೇಟ್ ಜನರಲ್ ರವರ ಆಪ್ತ ಸಿಬ್ಬಂದಿ ಶಾಖೆಗೆ ಸೃಜಿಸಲಾಗಿರುವ ಶೀಘ್ರಲಿಪಿಗಾರರ ಹುದ್ದೆ | 1 ಹುದ್ದೆ |

ಈ ಆದೇಶವನ್ನು ದಿನಾಂಕ: 10.7.1996 ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್.1185 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಫರೀದಾ ಅಸ್ಮಾ, ವೈದ್ಯಾಧಿಕಾರಿ, ಜಿ.ಎ.ಡಿ. 10ನೇ ವಾರ್ಡ್, ಹೊಸಪೇಟೆ, ಬಳ್ಳಾರಿ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** 1. ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಆರ್‌ಒ (4) 111/2003-04 ದಿನಾಂಕ: 25.02.2004.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಡಾ: ಫರೀದಾ ಅಸ್ಮಾ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಜಿ.ಎ.ಡಿ. 10ನೇ ವಾರ್ಡ್, ಹೊಸಪೇಟೆ, ಬಳ್ಳಾರಿ ಜಿಲ್ಲೆ ಇವರು 22.9.2002 ರಂದು ಸೇವೆಗೆ ಸೇರಿದು ವೈಯಕ್ತಿಕ ಕಾರಣಗಳಿಂದ ದಿನಾಂಕ: 1.6.2003 ರಿಂದ ಅನ್ವಯವಾಗುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುವ ಮೇರೆಗೆ ಸದರಿಯವರ ರಾಜೀನಾಮೆಯನ್ನು ದಿನಾಂಕ: 1.10.2003 ರಿಂದ ಪೂರ್ವಾನ್ವಯವಾಗಿ ಅಂಗೀಕರಿಸುವಂತೆ ಕೋರಿರುತ್ತಾರೆ. ಸದರಿಯವರ ವಿರುದ್ಧ ಯಾವುದೇ ವಿಚಾರಣೆ ಬಾಕಿ ಇರುವುದಿಲ್ಲವೆಂದು ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ. ಅದರಂತೆ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 264 ಹೆಚ್‌ಎಸ್‌ಹೆಚ್ 2004 ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಡಾ: ಫರೀದಾ ಅಸ್ಮಾ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಜಿ.ಎ.ಡಿ. 10ನೇ ವಾರ್ಡ್, ಹೊಸಪೇಟೆ, ಬಳ್ಳಾರಿ ಜಿಲ್ಲೆ, ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 1.10.2003 ರಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಕೆ. ತೆಗ್ಗಿನಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.1186

## LABOUR SECRETARIAT
## CORRIGENDUM
### No. LD 170 ETI 2004 Bangalore, dated 6th August 2005

In the order portion of Government Order No. LD 170 ETI 2004 dated: 13.6.2005, in the third line for the words "with effect from 19.3.2004. "the words" with effect from 20.07.2004" shall be substituted.

**M. P. NAGARAJA**
Desk Officer,
Labour Department.
(Employment and Training).

PR-1187

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಎನ್. ಬಿ. ಗೋವಿಂದರಾಜರಾವ್ ಹಿಂದಿನ ಸಸ್ಯಶಾಸ್ತ್ರ ಉಪನ್ಯಾಸಕರು (ಪ್ರಸ್ತುತ ವಯೋನಿವೃತ್ತಿ ಹೊಂದಿರುತ್ತಾರೆ) ಇವರ ವಿರುದ್ದದ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 196 ಡಿಸಿಇ 91 ದಿನಾಂಕ:12/13–04–92
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 196 ಡಿಸಿಇ 91 ದಿನಾಂಕ: 02–07–94
3. ನೋಟಿಸ್ ದಿನಾಂಕ:28–07–94
4. ಶ್ರೀ ಎನ್.ಬಿ. ಗೋವಿಂದರಾಜರಾವ್ ಅವರ ಲಿಖಿತ ಹೇಳಿಕೆ ದಿನಾಂಕ: 06–08–94
5. ಸರ್ಕಾರಿ ಆದೇಶ ಸಂಖ್ಯೆ: ಇಡಿ 196 ಡಿಸಿಇ 91 ದಿನಾಂಕ: 31–10–95
6. ಸಂಖ್ಯೆ: ಡಿಸಿಇ 42 ಎಡಿಪಿಎಸ್/95 ದಿನಾಂಕ:17–06–97 ವಿಚಾರಣಾ ವರದಿ.
7. ಸರ್ಕಾರಿ ಆದೇಶ ಸಂಖ್ಯೆ: ಇಡಿ 196 ಡಿಸಿಇ 91 ದಿನಾಂಕ: 29–01–98
8. ಸರ್ಕಾರಿ ಆದೇಶ ಸಂಖ್ಯೆ: ಇಡಿ 196 ಡಿಸಿಇ 91 ದಿನಾಂಕ:26–08–98
9. ವಿಚಾರಣಾ ವರದಿ ದಿನಾಂಕ:29/31–01–2000

**ಪ್ರಸ್ತಾವನೆ:**

ಶ್ರೀ ಎನ್.ಬಿ.ಗೋವಿಂದರಾಜರಾವ್ ಇವರು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಸಸ್ಯಶಾಸ್ತ್ರ ಉಪನ್ಯಾಸಕರಾಗಿ ದಿನಾಂಕ: 18–07–64ರಲ್ಲಿ ಸರ್ಕಾರಿ ಸೇವೆಗೆ ಸೇರಿರುತ್ತಾರೆ. ಇವರು ಸರ್ಕಾರಿ ಕಾಲೇಜು, ಮಂಡ್ಯ ಇಲ್ಲಿ ದಿನಾಂಕ: 25–06–69 ರಿಂದ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:04–01–71 ರಿಂದ ಅನ್ವಯವಾಗುವಂತೆ 2 ವರ್ಷಗಳ ಅವಧಿಗೆ ಉನ್ನತ ವ್ಯಾಸಂಗಕ್ಕಾಗಿ ಪೂಣೆ ವಿಶ್ವವಿದ್ಯಾಲಯಕ್ಕೆ ತೆರಳಲು ಅನುಮತಿ ನೀಡಿ ವ್ಯಾಸಂಗ ರಜೆ ಮಂಜೂರು ಮಾಡಲಾಗಿತ್ತು. ಉನ್ನತ ವ್ಯಾಸಂಗಕ್ಕೆಂದು ತೆರಳಿದ ಇವರು ತಮ್ಮ ನಿಗಧಿತ ಅವಧಿಯಲ್ಲಿ ವ್ಯಾಸಂಗವನ್ನು ಪೂರ್ಣಗೊಳಿಸಲಾಗಲಿಲ್ಲ. ಒಂದು ವರ್ಷ ಹೆಚ್ಚಿನ ಅವಧಿಯನ್ನು ವಿಸ್ತರಿಸಿಕೊಡಲಾಯಿತು. ವಿಸ್ತರಿಸಿದ ಅವಧಿಯು ದಿನಾಂಕ: 03–01–1974ಕ್ಕೆ ಪೂರ್ಣಗೊಂಡಿರುತ್ತದೆ. ವಿಸ್ತರಿಸಿದ ಅವಧಿಯಲ್ಲೂ ಉನ್ನತ ವ್ಯಾಸಂಗವನ್ನು ಪೂರ್ಣಗೊಳಿಸಿರುವುದಿಲ್ಲ. ದಿನಾಂಕ: 04–01–1974ರಂದು ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು. ಆದರೆ, ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ದಿನಾಂಕ:01–12–75ರಂದು ಇವರನ್ನು ಸರ್ಕಾರಿ ಬಾಲಕರ ಕಾಲೇಜು, ಕೋಲಾರ ಇಲ್ಲಿಗೆ ಸ್ಥಳ ನಿಯುಕ್ತಿ ಮಾಡಲಾಗಿರುತ್ತದೆ. ಶ್ರೀಯುತರು ಸದರಿ ಕಾಲೇಜಿನಲ್ಲಿ ದಿನಾಂಕ: 02–12–1975ರಂದು ಕರ್ತವ್ಯಕ್ಕೆ ಹಾಜರಾಗಿದ್ದರೂ ಸಹ ನಂತರ ಕರ್ತವ್ಯಕ್ಕೆ ಅನರ್ಧಿಷ್ಟ ದೀರ್ಘಾವಧಿಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಶ್ರೀ ಎನ್.ಬಿ.ಗೋವಿಂದರಾಜ್‌ರಾವ್ ರವರು ದೀರ್ಘಕಾಲದವರೆವಿಗೆ ಅನಧಿಕೃತ ಗೈರು ಹಾಜರಾಗಿದ್ದುದರಿಂದ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ:12/13–04–92ರ ಆದೇಶದಲ್ಲಿ ಅಮಾನತ್ತಿನಲ್ಲಿಡಲಾಗಿತ್ತು. ಶ್ರೀ ಎನ್.ಬಿ.ಗೋವಿಂದರಾಜರಾವ್ ಅವರು ಅಮಾನತ್ತಿನಲ್ಲಿರುವಾಗಲೇ ದಿನಾಂಕ:31–05–92ರಂದು ವಯೋ ನಿವೃತ್ತಿ ಹೊಂದಿರುತ್ತಾರೆ.

ಅವರು ಉನ್ನತ ವ್ಯಾಸಂಗ ಪಡೆಯಲು ಸರ್ಕಾರ ಕಲ್ಪಿಸಿದ ಸುವರ್ಣಾವಕಾಶವನ್ನು ದೊರಕಿಸಿಕೊಟ್ಟರೂ ಉನ್ನತ ವ್ಯಾಸಂಗವನ್ನು ಪೂರ್ಣಗೊಳಿಸದೆ ಮತ್ತು ಕರ್ತವ್ಯಕ್ಕೂ ಹಾಜರಾಗದೆ ಸುಮಾರು 15 ವರ್ಷಗಳ ಕಾಲ ಸೇವೆಗೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯ ಪ್ರಜ್ಞೆ ಇಲ್ಲದೇ ಬೇಜವಾಬ್ದಾರಿಯಿಂದ ವರ್ತಿಸಿ ವಿದ್ಯಾರ್ಥಿ ಸಮೂದಾಯಕ್ಕೆ ತುಂಬಲಾರದ ನಷ್ಟವನ್ನುಂಟು ಮಾಡಲು ಕಾರಣರಾದ ಅವರ ದುರ್ನಡತೆ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 214ರ ಅಡಿಯಲ್ಲಿ ಇಲಾಖಾ ವಿಚಾರಣೆ ಹೂಡಲು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 2.7.94ರ ಆದೇಶದಲ್ಲಿ ಆದೇಶ ಹೊರಡಿಸಲಾಯಿತು.

ಅವರ ವಿರುದ್ಧದ ಆರೋಪ ಪಟ್ಟಿಗಳನ್ನು ರಚಿಸಿ ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ: 28.7.98ರ ತಿಳುವಳಿಕೆ ಪತ್ರದ ಮುಖೇನ ಆರೋಪ ಪಟ್ಟಿಗಳನ್ನು ಜಾರಿ ಮಾಡಲಾಯಿತು. ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕ: 6.8.94ರಂದು ಆರೋಪಿತರು ಲಿಖಿತ ಹೇಳಿಕೆಯನ್ನು ಸಲ್ಲಿಸಿದ್ದರು. ಅವರ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿತ್ತಾದರೂ ಅವರ ವಿರುದ್ಧದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುತ್ತವೆ ಎಂದು ಮನಗಂಡು ಪೂರ್ಣ ಪ್ರಮಾಣದ ವಿಚಾರಣೆಗೆ ಗುರಿಪಡಿಸಲು ತೀರ್ಮಾನಿಸಿ ಮೇಲೆ ಕ್ರಮಾಂಕ (5)ರಲ್ಲಿ ಓದಲಾದ ದಿನಾಂಕ: 31.10.95ರ ಆದೇಶದಲ್ಲಿ ಇಲಾಖಾ ವಿಚಾರಣೆ ಜರುಗಿಸಲು ಆರೋಪಿತರಾದ ಶ್ರೀ ಎನ್.ಬಿ.ಗೋವಿಂದರಾಜ್ ರಾವ್ ಅವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11ರಡಿಯಲ್ಲಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಬಿ.ಆರ್.ರಾಮಚಂದ್ರಗೌಡ, ಹೆಚ್ಚುವರಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಡಾ: ಎಸ್.ಗುರುಮೂರ್ತಿ, ಉಪ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ರವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಿ ಆದೇಶಿಸಲಾಯಿತು. ವಿಚಾರಣಾಧಿಕಾರಿಗಳು, ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರಮಾಂಕ (6)ರಲ್ಲಿ ಓದಲಾದ ದಿನಾಂಕ: 17.6.97ರಂದು ವಿಚಾರಣಾ ವರದಿಯನ್ನು ಸಲ್ಲಿಸಿದ್ದರು. ಇಲಾಖಾ ವಿಚಾರಣಾ ವರದಿಯಲ್ಲಿ ಆರೋಪಿತರ ವಿರುದ್ಧದ ಎಲ್ಲಾ ಆರೋಪಗಳು ರುಜುವಾತಾಗಿರುವುದು ವರದಿಯಾಗಿದ್ದರೂ ಸಹ ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ವಿಚಾರಣೆ ನಡೆಸುವಲ್ಲಿ ಕೆಲವು ನ್ಯೂನ್ಯತೆಗಳು ಕಂಡುಬಂದ ಪ್ರಯುಕ್ತ ವಿಚಾರಣಾ ವರದಿಯು ಅಸಿಂಧುವಾಗಿದ್ದ ಕಾರಣ, ಹೆಚ್ಚಿನ ಪಾರದರ್ಶಕತೆ ಕಂಡುಕೊಳ್ಳಲು ಮೇಲೆ ಕ್ರಮಾಂಕ (7)ರಲ್ಲಿ ಓದಲಾದ ದಿನಾಂಕ: 29.1.98ರ ಆದೇಶದಲ್ಲಿ ವಿಚಾರಣಾಧಿಕಾರಿಯನ್ನು ಮಾತ್ರ ಬದಲಿಸಿ ಶ್ರೀ ಬಿ.ವಿನಾಯಕ, ಉಪ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಯಿತು.

ತದನಂತರ ಮೇಲೆ ಕ್ರಮಾಂಕ (8)ರಲ್ಲಿ ಓದಲಾದ ದಿನಾಂಕ: 26.8.98 ಆದೇಶದಲ್ಲಿ ಪುನ: ವಿಚಾರಣಾಧಿಕಾರಿಯನ್ನು ಮಾತ್ರ ಬದಲಿಸಿ ಶ್ರೀ ಬಿ.ವಿನಾಯಕ ಅವರ ಬದಲಿಗೆ ಡಾ: ಎಂ.ಎ. ಜಯಚಂದ್ರ, ಕನ್ನಡ ಪ್ರಾಧ್ಯಾಪಕರು, ಕಾಲೇಜು ಶಿಕ್ಷಣ ಇಲಾಖೆ, ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಯಿತು. ವಿಚಾರಣಾಧಿಕಾರಿಗಳು ನಿಯಮಾವಳಿಗಳನ್ವಯ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರಮಾಂಕ (9)ರಲ್ಲಿ ಓದಲಾದ ದಿನಾಂಕ: 29/31–01–2000ರಲ್ಲಿ ವಿಚಾರಣಾಧಿಕಾರಿಗಳು ಸಮಗ್ರವಾದ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ಸಲ್ಲಿಸಿದ್ದ ವರದಿಯನ್ನು ಆರೋಪಿತರಿಗೆ ಸರ್ಕಾರದ ಪತ್ರ ಸಂಖ್ಯೆ: ಇಡಿ 196 ಡಿಸಿಇ 91 ದಿನಾಂಕ: 21.01.2000ರ ಮೂಲಕ ಜಾರಿ ಮಾಡಲಾಗಿತ್ತು. ಆರೋಪಿತರು ದಿನಾಂಕ: 29.04.2000ರಂದು ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿ ಹಾಗೂ ಆರೋಪಿತರು ದಿನಾಂಕ: 29–04–2000ರಂದು ಸಲ್ಲಿಸಿದ ಲಿಖಿತ ಹೇಳಿಕೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿದ ನಂತರ ಆರೋಪಿತರ ವಿರುದ್ಧದ ಆರೋಪಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ನಿರ್ಣಯಿಸಿರುವುದನ್ನು ಸರ್ಕಾರ ಒಪ್ಪಿಕೊಂಡು ಆರೋಪಿತರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 214ರ ಅಡಿಯಲ್ಲಿ ಅವರಿಗೆ ಲಭಿಸಬಹುದಾದ ವಿಶ್ರಾಂತಿ ವೇತನವನ್ನು ಪೂರ್ಣವಾಗಿ ಅಥವಾ ಖಾಯಂ ಆಗಿ ಅಥವಾ ನಿರ್ಧಿಷ್ಟ ಅವಧಿಗೆ ತಡೆಹಿಡಿಯಲು ಒಂದು ಹಂತದಲ್ಲಿ ಪರಿಶೀಲಿಸಲಾಗಿದ್ದು, ಉದ್ದೇಶಿತ ಈ ಕ್ರಮದ ಬಗ್ಗೆ ಆರೋಪಿತರಿಗೆ ಸರ್ಕಾರದ ಪತ್ರ ಸಂಖ್ಯೆ: ಇಡಿ 196 ಡಿಸಿಇ 91 ದಿನಾಂಕ: 18–10–2003ರನ್ವಯ 2ನೇ ಕಾರಣ ಕೇಳುವ ನೋಟೀಸ್ ನೀಡಲಾಯಿತು. ಈ ಬಗ್ಗೆ ಆರೋಪಿತರು 25.11.2003ರಂದು ಲಿಖಿತ ಹೇಳಿಕೆ ನೀಡಿರುತ್ತಾರೆ. ವಿಚಾರಣಾ ವರದಿ ಮತ್ತು ಆರೋಪಿತರು ಎರಡು ಹಂತದಲ್ಲಿ ಸರ್ಕಾರಕ್ಕೆ ಸಲ್ಲಿಸಿದ ಲಿಖಿತ ಹೇಳಿಕೆ ಮತ್ತು ಸಂಬಂಧಪಟ್ಟ ಎಲ್ಲಾ ಪೂರಕ ದಾಖಲೆಗಳನ್ನು ಸರ್ಕಾರವು ಸಮಗ್ರವಾಗಿ ಪರಿಶೀಲಿಸಿದ ನಂತರ,

ಅ) ಶ್ರೀ ಎನ್.ಬಿ.ಗೋವಿಂದರಾಜ್ ರಾವ್ ಅವರು ದಿನಾಂಕ: 4–1–71 ರಿಂದ 3–1–74ರ ಅವಧಿಯಲ್ಲಿ ಉನ್ನತ ವ್ಯಾಸಂಗ ಪಡೆಯಲು ಸರ್ಕಾರ ಕಲ್ಪಿಸಿದ ಸುವರ್ಣಾವಕಾಶವನ್ನು ದುರುಪಯೋಗಪಡಿಸಿಕೊಂಡು ಉನ್ನತ ವ್ಯಾಸಂಗವನ್ನು ಪೂರ್ಣಗೊಳಿಸದೇ ವ್ಯಾಸಂಗದ ಅವಧಿಯ ನಡುವೆ 1974ರ ಸಾಲಿನಲ್ಲಿ ಪೂಣೆಯಿಂದ ಮೈಸೂರಿಗೆ ಹೋದವರು ಒಂದು ವರ್ಷಕಾಲ ವ್ಯಾಸಂಗಕ್ಕೆ ಹೋಗಿಲ್ಲ ಎಂಬುದು ಸಾಬೀತಾಗಿರುವುದರಿಂದಾಗಿ ಮತ್ತು ವಿಸ್ತರಿಸಿದ ವ್ಯಾಸಂಗದ ಅವಧಿ 3.1.74ಕ್ಕೆ ಪೂರ್ಣಗೊಂಡಿದ್ದರಿಂದ 4.1.74ರಂದು ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿದ್ದಾಗ್ಯೂ ಕರ್ತವ್ಯಕ್ಕೆ ಹಾಜರಾಗಲಿಲ್ಲದ ಪ್ರಯುಕ್ತ ಈ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 14(ಎ)ರಡಿಯಲ್ಲಿ "ಲೆಕ್ಕಕ್ಕಿಲ್ಲದ" (dies non) ಎಂದು ಪರಿಗಣಿಸಲೂ,

ಆ) ಕಾಲೇಜು ಶಿಕ್ಷಣ ಆಯುಕ್ತರ ಕಛೇರಿ ಆದೇಶ ದಿನಾಂಕ: 14–11–75ರ ಪ್ರಕಾರ ಅವರಿಗೆ ಸರ್ಕಾರಿ ಬಾಲಕರ ಕಾಲೇಜು, ಕೋಲಾರ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಿ ದಿನಾಂಕ: 1–12–75ರ ಒಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದೆಂದು ಸೂಚನೆ ನೀಡಲಾಗಿತ್ತು. ಕೋಲಾರ ಸರ್ಕಾರಿ ಬಾಲಕರ ಕಾಲೇಜಿನಲ್ಲಿ 2.12.75ರಂದು ಒಂದು ದಿನ ಮಾತ್ರ ಕರ್ತವ್ಯಕ್ಕೆ ಹಾಜರಾದವರು ಮತ್ತೆ ಪುನ: ಕರ್ತವ್ಯಕ್ಕೆ ಹಾಜರಾಗದೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ದಿನಾಂಕ: 02–12–1975ರ ಒಂದು ದಿನವನ್ನು

ಹೊರತುಪಡಿಸಿ, ದಿನಾಂಕ: 3.12.75 ರಿಂದ 29.2.76ರವರೆಗಿನ ಅವಧಿಯನ್ನು ಮೇಲೆ ಹೇಳಲಾದ ನಿಯಮಾವಳಿಗಳಡಿಯಲ್ಲಿಯೇ "ಲೆಕ್ಕಕ್ಕಿಲ್ಲದ" (dies non) ಎಂದು ಪರಿಗಣಿಸಲೂ,

ಇ) ದಿನಾಂಕ: 1.3.76 ರಿಂದ 30.6.76ರ ಅವಧಿಯಲ್ಲಿ ಒಟ್ಟು 4 ತಿಂಗಳುಗಳ ಅವಧಿಯಲ್ಲಿ ಆರೋಪಿತರು ಪ್ರತ್ಯೇಕವಾಗಿ (ಅಂದರೆ ಬೇರೆ ಬೇರೆ ದಿನಗಳಲ್ಲಿ) ಕೇವಲ 7 ದಿನಗಳು ಮಾತ್ರ ಕರ್ತವ್ಯಕ್ಕೆ ಹಾಜರಾತಿ ಪುಸ್ತಕದಲ್ಲಿ ಕಿರು ಸಹಿ ಮಾಡಿರುವುದು ಕಂಡು ಬಂದಾಗ್ಯೂ ಕರ್ತವ್ಯ ಪ್ರಜ್ಞೆ ಇಲ್ಲದೇ ಅನಧಿಕೃತ ಗೈರುಹಾಜರಾಗಿ ವಿದ್ಯಾರ್ಥಿಗಳ ಸಮುದಾಯಕ್ಕೆ ನಷ್ಟವುಂಟು ಮಾಡಿ ದುರ್ನಡತೆ ಎಸಗಿರುವುದು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ದಿನಾಂಕ: 1–3–76 ರಿಂದ 30–6–76ರ ಅವಧಿಯನ್ನೂ ಸಹ ಮೇಲೆ ಹೇಳಲಾದ ನಿಯಮಾವಳಿಗಳಡಿಯಲ್ಲಿಯೇ "ಲೆಕ್ಕಕ್ಕಿಲ್ಲದ" (dies non) ಎಂದು ಪರಿಗಣಿಸಲೂ,

ಈ) ದಿನಾಂಕ: 1.7.76 ರಿಂದ 11.4.92ರ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದು ವಿಚಾರಣೆಯಲ್ಲಿ ದೃಢಪಟ್ಟಿರುವುದರಿಂದ, ಈ ಅವಧಿಯನ್ನೂ ಸಹ ಮೇಲೆ ಹೇಳಲಾದ ನಿಯಮಾವಳಿಗಳ ಅಡಿಯಲ್ಲಿಯೇ "ಲೆಕ್ಕಕ್ಕಿಲ್ಲದ" (dies non) ಎಂದೇ ಪರಿಗಣಿಸಲೂ,

ಉ) ದಿನಾಂಕ: 12.4.92 ರಿಂದ 31.5.92ರ ಅವಧಿಯಲ್ಲಿ (ವಯೋ ನಿವೃತ್ತಿ ಹೊಂದಿದ ದಿನಾಂಕದವರೆಗೆ) ಶ್ರೀ ಎನ್.ಬಿ.ಗೋವಿಂದರಾಜ್ ರಾವ್ ರವರು ಅಮಾನತ್ತಿನಲ್ಲಿದ್ದು, ಅಮಾನತ್ತಿನಲ್ಲಿ ಕಳೆದ ಅವಧಿಯನ್ನು "ಅಮಾನತ್ತಿನಲ್ಲಿ ಕಳೆದ ಅವದಿ" ಯಂದೇ ಪರಿಗಣಿಸಲು ನಿರ್ಣಯಿಸಲಾಯಿತು.

ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 222ರನ್ವಯ ನಿಯಮ 291ರನ್ವಯ ಓದಲಾದ ರೀತ್ಯ 10 ವರ್ಷ ಅರ್ಹತಾದಾಯಕ ಸೇವೆ ಪೂರೈಸಿದ್ದಲ್ಲಿ ಮಾತ್ರ ಪಿಂಚಣಿ ಪಡೆಯಲು ಸರ್ಕಾರಿ ನೌಕರನು ಅರ್ಹನಾಗುತ್ತಾನೆ. ಆದರೆ ಶ್ರೀ ಎನ್.ಬಿ.ಗೋವಿಂದರಾಜ್ ರಾವ್ ರವರು ತಮ್ಮ ಸೇವಾ ಅವಧಿಯಲ್ಲಿ 10 ವರ್ಷ ಅರ್ಹತಾದಾಯಕ ಸೇವೆ ಸಲ್ಲಿಸಿದಂತಾಗುವುದಿಲ್ಲದ ಪ್ರಯುಕ್ತ ಪಿಂಚಣಿ ಸೌಲಭ್ಯಗಳಿಗೆ ಅರ್ಹರಾಗುವುದಿಲ್ಲವೆಂದು ನಿರ್ಣಯಿಸಲಾಯಿತು.

ಶ್ರೀ ಗೋವಿಂದರಾಜ್ ರಾವ್ ಅವರು ಎಸಗಿರುವ ಈ ರೀತಿಯ ದುರ್ನಡತೆ ತೀವ್ರ ಗಂಭೀರ ಸ್ವರೂಪದ್ದಾಗಿದ್ದು, ಸೇವೆಯಲ್ಲಿದ್ದರೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 8(viii)ರಡಿಯಲ್ಲಿ ಸೇವೆಯಿಂದ ವಜಾಗೊಳಿಸುವ ಗರಿಷ್ಠ ದಂಡನೆಗೆ ಗುರಿಯಾಗುತ್ತಿದ್ದರು. ಆದರೆ, ವಯೋನಿವೃತ್ತಿ ಹೊಂದಿರುವುದರಿಂದಾಗಿ ಮೇಲೆ (ಅ) ರಿಂದ (ಉ)ರವರೆಗೆ ಪರಿಶೀಲಿಸಲಾಗಿರುವಂತೆ, ದಿನಾಂಕ: 02–12–75ರ ಒಂದು ದಿನವನ್ನು ಮಾತ್ರ ಹೊರತುಪಡಿಸಿ ಬಾಕಿ ಎಲ್ಲಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 14(ಎ)ರಡಿಯಲ್ಲಿ "ಲೆಕ್ಕಕ್ಕಿಲ್ಲದ" (dies non) ಅವಧಿಯೆಂದು ಪರಿಗಣಿಸಿ ಪಿಂಚಣಿ ಸೌಲಭ್ಯಗಳನ್ನು ಪಡೆಯಲು ಅನರ್ಹತೆಗೊಳಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 196 ಡಿಸಿಇ 91 ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2005**

ಪ್ರಸ್ತಾವನೆ ಭಾಗದಲ್ಲಿ ಪರಿಶೀಲಿಸಿರುವ ಕಾರಣಗಳಿಂದಾಗಿ ಶ್ರೀ ಎನ್.ಬಿ.ಗೋವಿಂದರಾಜರಾವ್ ಹಿಂದಿನ ಸಸ್ಯಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ, ಪ್ರಸ್ತುತ ವಯೋನಿವೃತ್ತಿ ಹೊಂದಿರುವ ಇವರು ತಮ್ಮ ಸೇವಾ ಅವಧಿಯಲ್ಲಿ ದಿನಾಂಕ: 04–01–71 ರಿಂದ 11–04–92ರವರೆಗೆ (ದಿನಾಂಕ: 02–12–75ರ ಒಂದು ದಿನವನ್ನು ಮಾತ್ರ ಹೊರತುಪಡಿಸಿ) ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 14(ಎ)ರಡಿಯಲ್ಲಿ "ಲೆಕ್ಕಕ್ಕಿಲ್ಲದ" (dies non) ಅವಧಿಯೆಂದು ಮತ್ತು ದಿನಾಂಕ: 12–04–92 ರಿಂದ 31–05–92ರವರೆವಿಗೆ "ಅಮಾನತ್ತಿನಲ್ಲಿ ಕಳೆದ ಅವಧಿ" ಎಂದು ಪರಿಗಣಿಸಿ ಆದೇಶಿಸಲಾಗಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 222ರನ್ವಯ ನಿಯಮ 291ರನ್ವಯ ಓದಲಾದ ರೀತ್ಯಾ 10 ವರ್ಷಗಳ ಅರ್ಹತದಾಯಕ ಸೇವೆಯನ್ನು ಶ್ರೀ ಎನ್.ಬಿ.ಗೋವಿಂದರಾಜ್ ರಾವ್ ರವರು ಹೊಂದಿಲ್ಲದ ಕಾರಣ ಪಿಂಚಣಿ ಸೌಲಭ್ಯಗಳನ್ನು ಪಡೆಯಲು ಅನರ್ಹತೆಗೊಳಿಸಿಯೂ ಸಹ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ–1363–ವೆಚ್ಚ–8/04 ದಿನಾಂಕ: 16–12–2004ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1175

**ಮೇರಿ ಜಾಯ್ಸ್**
ಸರ್ಕಾರದ ಉಪ ಕಾರ್ಯದರ್ಶಿ,
ಶಿಕ್ಷಣ ಇಲಾಖೆ(ಉನ್ನತ ಶಿಕ್ಷಣ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಪ್ರಧಾನ ಮಂತ್ರಿಗಳ ಗ್ರಾಮ ಸಡಕ್ ಯೋಜನೆ ರಸ್ತೆ ಕಳಪೆ ಕಾಮಗಾರಿ- ಶ್ರೀ ಶಕೀರ್‌ರಾಜ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಔರಾದ ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ-ಆದೇಶ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಪಂಚಾಯತ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ಮುಇಂ: ಪಂರಾಇಂಇ: ಸಇಂ: 2005-06: 205, ದಿನಾಂಕ: 28.6.2005.

**ಪ್ರಸ್ತಾವನೆ:**

ಔರಾದ್ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದ, ವ್ಯಾಪ್ತಿಯಲ್ಲಿ ಪ್ರಧಾನ ಮಂತ್ರಿಗಳ ಗ್ರಾಮ ಸಡಕ್ ಯೋಜನೆಯ 3ನೇ ಹಂತದಲ್ಲಿ ಕೈಗೆತ್ತಿಕೊಳ್ಳಲಾದ ಔರಾದ ತಾಲ್ಲೂಕಿನ ಗುಡಪಲ್ಲಿಯಿಂದ-ಮೇದಪಲ್ಲಿ ಮಾರ್ಗವಾಗಿ ಉಜನಿಗೆ ಸೇರುವ ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ದಿನಾಂಕ: 16.6.2005 ಮತ್ತು 17.6.2005 ರಂದು ಪರಿವೀಕ್ಷಣೆ ಮಾಡಿದ ಸಮಯದಲ್ಲಿ ಈ ಕೆಳಗಿನಂತೆ ಸದರಿ ಕಾಮಗಾರಿಯ ಗುಣಮಟ್ಟ ಕಳಪೆಯಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ.

1. ರಸ್ತೆಯ ಗ್ರೇಡ್-3 ಜಲ್ಲಿಯ ಬಿಛಾವಣೆ ಕೆಲಸ ಪ್ರಗತಿಯಲ್ಲಿದ್ದ ಜಲ್ಲಿಯ Gradation Specification ನಂತೆ ಇರಲಿಲ್ಲ. 60mm ಗಿಂತ ಹೆಚ್ಚು ದಪ್ಪದ ಜಲ್ಲಿಯು ಸುಮಾರು 20 percent ನಷ್ಟಿದ್ದು, ಹಾಗೂ 25mm ಗಿಂತ ಕಡಿಮೆ ಗಾತ್ರದ ಜಲ್ಲಿಯು ಪದರಕ್ಕೆ Screening ಉಪಯೋಗಿಸುತ್ತಿರುವುದಿಲ್ಲ.
2. Grade-3 ಜಲ್ಲಿ ಪದರಕ್ಕೆ Screening ಉಪಯೋಗಿಸುತ್ತಿರುವುದಿಲ್ಲ.
3. Primer ಪದರಕ್ಕೆ ಅಂದಾಜಿನಲ್ಲಿರುವಂತೆ Emuision ಬಳಸದೆ ಡಾಂಬರನ್ನು Tack-Coat ಮಾದರಿಯಲ್ಲಿ ಹಾಕಿ ಅದರ ಮೇಲೆ 13mm ಜಲ್ಲಿಯನ್ನು ರೋಲಿಂಗ್ ಮಾಡಲಾಗುತ್ತಿತ್ತು.
4. ಜಲ್ಲಿಯ ಪರಿಮಾಣವನ್ನು ಪರಿಶೀಲಿಸಲು ಯಾವುದೇ ಉಪಕರಣ ಲಭ್ಯವಿರಲಿಲ್ಲ ಹಾಗೂ ಕಿರಿಯ ಇಂಜಿನಿಯರರು ಹಾಜರಿರಲಿಲ್ಲ.
5. ಕಿರಿಯ ಇಂಜಿನಿಯರರು ನಿಗದಿತವಾದ ಪರೀಕ್ಷೆಗಳನ್ನು ಮಾಡಿರುವುದಿಲ್ಲ ಮತ್ತು Q.C. Registerಗಳನ್ನು ಹೊಂದಿರುವುದಿಲ್ಲ.

ಮೇಲಿನಂತೆ ಈ ಕಾಮಗಾರಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಶಕೀರ್‌ರಾಜ, ಕಿರಿಯ ಇಂಜಿನಿಯರ್ ಇವರು ಈ ಕಾಮಗಾರಿ ನಿರ್ವಹಿಸುವಲ್ಲಿ ತೀವ್ರ ನಿರ್ಲಕ್ಷ್ಯ ವಹಿಸಿ ಕರ್ತವ್ಯಲೋಪವೆಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿದೆ ಆದ್ದರಿಂದ, ಶ್ರೀ ಶಕೀರ್‌ರಾಜ, ಕಿರಿಯ ಇಂಜಿನಿಯರ್, ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಔರಾದ ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲು ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಮುಖ್ಯ ಇಂಜಿನಿಯರ್‌ರವರ ವರದಿಯನ್ನು ಪರಿಶೀಲಿಸಿ ಶ್ರೀ ಶಕೀರ್‌ರಾಜ, ಕಿರಿಯ ಇಂಜಿನಿಯರ್ ಇವರು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ತೀವ್ರ ಲೋಪ ಮತ್ತು ನಿರ್ಲಕ್ಷತನವೆಸಗಿದ್ದು ಇವುಗಳು ಅವರ ಕರ್ತವ್ಯ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸುವಂಥವುಗಳಾಗಿ ರುವುದರಿಂದಲೂ; ಮತ್ತು ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಕೈಗೊಳ್ಳಲು ಅವಲೋಕಿಸಿ ಶ್ರೀ ಶಕೀರ್‌ರಾಜ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಔರಾದ ಇವರನ್ನು ಅಮಾನತ್ತಿನಲ್ಲಿಡಲು ಸರ್ಕಾರವು ನಿರ್ಣಯಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 24 ಇಎನ್‌ಕ್ಯೂ 05 ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ 10ನೇ ನಿಯಮದ 1(ಡಿ) ಉಪ-ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಶಕೀರ್‌ರಾಜ, ಕಿರಿಯ ಇಂಜಿನಿಯರ್ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಔರಾದ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಶಕೀರ್‌ರಾಜ, ಕಿರಿಯ ಇಂಜಿನಿಯರ್, ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಔರಾದ ಇವರಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಶಕೀರ್‌ರಾಜ, ಕಿರಿಯ ಇಂಜಿನಿಯರ್, ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ತಮ್ಮ ಕಛೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಪಿ.ಆರ್.1129

**ವಿಷಯ :** ಡಿಆರ್‌ಡಿಎ ಆಡಳಿತ ಯೋಜನೆಯಡಿ ಬದಲಿ ವಾಹನ ಖರೀದಿಸುವ ಬಗ್ಗೆ.

**ಓದಲಾಗಿದೆ :** 1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್ 20015-32-2004 ಡಿಆರ್‌ಡಿಎ ದಿನಾಂಕ: 03.01.2005.
2. ಚಿಕ್ಕಮಗಳೂರು ಜಿಲ್ಲೆಯ ಪತ್ರದ ದಿನಾಂಕ: 04.03.2005, 05.05.2005 ಮತ್ತು 21.05.2005.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಉಲ್ಲೇಖ (1)ರ ಪತ್ರದಲ್ಲಿ ಬದಲಿ ವಾಹನ ಖರೀದಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡಿರುತ್ತದೆ. ಇದರನ್ವಯ ಚಿಕ್ಕಮಗಳೂರು ಜಿಲ್ಲಾ ಪಂಚಾಯತ್ ದಿನಾಂಕ: 04.03.2005 ರಂದು ಬದಲಿ ವಾಹನ ಖರೀದಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿತು. ದಿನಾಂಕ: 28.05.2002 ರಂದು ಚಿಕ್ಕಮಗಳೂರು ಪ್ರಾದೇಶಿಕ ಅಧಿಕಾರಿಗಳು, ಎಂವೈಸಿ 7384 ವಾಹನವನ್ನು ಅನುಪಯುಕ್ತವೆಂದು ಘೋಷಿಸಿ ಇದರ ಅಂದಾಜು ಬೆಲೆ ರೂ.24,000-00 ವೆಂದು ಅಂದಾಜಿಸಿದ್ದರು. ಆದರೆ ಜಿಲ್ಲಾ ಪಂಚಾಯತ್ ಸದರಿ ವಾಹನವನ್ನು ದಿನಾಂಕ: 25.11.2002 ರಲ್ಲಿ ಬಹಿರಂಗ ಹರಾಜು ಮಾಡಿ ರೂ. 9,847-00 ನ್ನು ದಿನಾಂಕ: 03.03.2005 ರಂದು ಸರ್ಕಾರಕ್ಕೆ ಜಮೆ ಮಾಡಿದೆ. ಹೊಸ ಕಾರನ್ನು ಖರೀದಿಸಲು ಮೆ: ಹಿಂದೂಸ್ತಾನ್ ಮೋಟಾರ್ಸ್ ಕಂಪನಿಯವರಿಂದ proforma invoice ಪಡೆದಿದ್ದು, ಕಾರಿನ ಅಂದಾಜು ಬೆಲೆ ರೂ.4,12,366/- ಆಗುವುದು. ಹರಾಜು ಮಾಡಿದ ವಾಹನ ಸಂಖ್ಯೆ: ಎಂವೈಸಿ 7384ರ ಬದಲಿಗೆ ಡಿಆರ್‌ಡಿಎ ಆಡಳಿತ ವೆಚ್ಚದಲ್ಲಿ ಉಳಿತಾಯವಾಗುವ ಹಣದಿಂದ ಒಂದು ಅಂಬಾಸಿಡರ್ ಕಾರು ಖರೀದಿಸಲು ಅನುಮೋದನೆ ಕೋರಿರುತ್ತಾರೆ. ಆದ ಕಾರಣ ಕಾರು ಖರೀದಿಗೆ ಅನುಮತಿ ನೀಡಲು ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 4 ಸ್ವಜಯೋ ಡಿಆರ್‌ಡಿಎ 2005, ಬೆಂಗಳೂರು ದಿನಾಂಕ: 25ನೇ ಜುಲೈ 2005**

ರಾಜ್ಯ ಸರ್ಕಾರವು ಚಿಕ್ಕಮಗಳೂರು ಜಿಲ್ಲೆಗೆ ಎಂವೈಸಿ 7384ರ ವಾಹನದ ಬದಲಿಗೆ ಒಂದು ಹೊಸ ಅಂಬಾಸಿಡರ್ ಕಾರನ್ನು ಖರೀದಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

ಕಾರನ್ನು ಕೇಂದ್ರ ಸರ್ಕಾರದ ಪತ್ರ ದಿನಾಂಕ: 03.01.2005 ರನ್ವಯ ಖರೀದಿಸತಕ್ಕದ್ದು.

ಡಿಆರ್‌ಡಿಎ ಆಡಳಿತ ಯೋಜನೆಯಡಿ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನದಿಂದ ಭರಿಸತಕ್ಕದ್ದು.

ವೇತನಕ್ಕಾಗಿ ಖರ್ಚು ಮಾಡುವ ಗರಿಷ್ಟ ಶೇಕಡಾ 30 ರಷ್ಟರಲ್ಲಿ ಉಳಿತಾಯವಾಗುವ ಸಾದಿಲ್ವಾರು ವೆಚ್ಚದಿಂದ ಭರಿಸುವುದು ಹಾಗೂ ಖರೀದಿಸಿದ ನಂತರ ಸರ್ಕಾರಕ್ಕೆ ತಿಳಿಸತಕ್ಕದ್ದು. ಕಾರು ಖರೀದಿಯನ್ನು ಸರ್ಕಾರದ ಖರೀದಿ ನಿಯಮಗಳಿಗೊಳಪಟ್ಟು ಖರೀದಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ: ಆಇ 1423 ವೆಚ್ಚ:6: 2004 ದಿನಾಂಕ: 21.07.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಬಿ. ಹಿರೇಮಣಿಯವರ್**

ನಿರ್ದೇಶಕರು (ಸ್ವಉಕಾ) ಮತ್ತು ಪ.ನಿ, ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಪಿ.ಆರ್.1132

## ನಗರಾಭಿವೃದ್ಧಿ ಸಚಿವಾಲಯ

## ಅಧಿಕೃತ ಜ್ಞಾಪನ

### ಸಂಖ್ಯೆ: ನಅಇ 11 ನಯೋಸೆ 2005 ಬೆಂಗಳೂರು, ದಿನಾಂಕ: 29ನೇ ಜುಲೈ 2005

**ವಿಷಯ :** ದಿನಾಂಕ: 1.1.2005 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಕಿರಿಯ ನಗರ ಯೋಜಕರ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ :** 1. ನಯೋಸಿ 6,509 ಕಿ.ಜ್ಯೇ.ಪ 2005 ದಿನಾಂಕ: 21.03.2005.

ಅಧಿಕೃತ ಜ್ಞಾಪನ ಸಂಖ್ಯೆ: ನಅಇ 11 ನಯೋಸೇ 2005, ದಿನಾಂಕ: 2.2.2005 ರಲ್ಲಿ, ದಿನಾಂಕ: 1.1.2005 ರಲ್ಲಿದ್ದಂತೆ, ನಗರ ಯೋಜನಾ ಇಲಾಖೆಯ ಕಿರಿಯ ನಗರ ಯೋಜಕರ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು. ಪ್ರಕಟಿತ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಗೆ ಆಕ್ಷೇಪಣೆಗಳನ್ನು ಸ್ವೀಕರಿಸಲಾಗಿದ್ದು, ಅವುಗಳನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗಿದೆ.

ಆದ್ದರಿಂದ, ದಿನಾಂಕ: 1.1.2005 ರಲ್ಲಿದ್ದಂತೆ, ನಗರ ಯೋಜನಾ ಇಲಾಖೆಯ ಕಿರಿಯ ನಗರ ಯೋಜಕರ ಅಂತಿಮ ಜ್ಯೇಷ್ಠತಾಪಟ್ಟಿಯನ್ನು ಸಂಬಂಧಪಟ್ಟ ಎಲ್ಲರ ಗಮನಕ್ಕೆ ಪ್ರಕಟಿಸಲಾಗಿದೆ.

**ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್.1133

## FINANCE SECRETARIAT

**Sub:** Removal of anomaly in the pay of senior and junior Government servants arising out of grant of stagnation increment/s–orders-reg.

**Read:** (1) G.O. No. FD 3 SRP 96 dated 18th March 1996.
(2) G.O. No. FD 1 SRP 96 dated 8th May 1997.

**Preamble:**

According to the orders that were in force prior to 1-4-1996, a Government servant who stagnated at the maximum of the scale of pay applicable to the post held by him was eligible for the benefit of 3 stagnation increments in the entire service at the rate of increment last drawn.

The system of grant of stagnation increment was reviewed by the Government and modified orders were issued in Government Order dated 18th March 1996 read at (1) above. According to the said order, a Government servant who stagnates at the maximum of the scale of pay applicable to the post held by him is eligible for the benefit of 5 stagnation increments annually in the entire service at the rate of increment last drawn.

Several cases have been brought to the notice of the Government wherein the Government servants who get stagnation increment/s in the pre-revised scale of pay applicable to them draw pay lower than that of their junior who gets stagnation increment/s in the revised scales of pay applicable to him. Removal of such anomalies in the pay of the senior and junior Government servant is considered necessary by the Government and accordingly the following orders are issued.

### GOVERNMENT ORDER NO. FD 27 SRP 2005(2), BANGALORE, DATED: 22nd AUGUST 2005.

Government are pleased to order that where a Government servant who is granted stagnation increment/s in the pre-revised scale applicable to him draws pay lower than that of his junior who is granted stagnation increment/s in the revised scale applicable to him, the pay of the senior Government servant can be stepped up to that of his junior subject to the following conditions:-

(1) Both the senior and junior Government servants should belong to the same cadre.

(2) As on the date of grant of stagnation increments to the senior Government servant, he should have drawn pay in the pre-revised scale applicable to him a basic pay not less than that drawn by the junior Government servant.

(3) The junior Government servant should be drawing more pay than the senior Government servant only on account of grant of stagnation increment in the revised scale of pay applicable to him.

2. The benefit of stepping up of pay in accordance with these orders shall not be admissible to the senior Government servant in the following cases:

(1) Where he fails to exercise option to continue in the scale of pay of the lower post or selection time scale of pay or senior scale of pay, as the case may be, until he gets the benefit of stagnation increment in terms of G.O. dated 8-5-97 read at (2) above.

(2) Where he fails to exercise option for Senior scale of pay on promotion in terms of 3rd proviso to rule 3 of the Karnataka Civil Services (Automatic Grant of Special Promotion to Senior Scale of Pay) Rules, 1991 as inserted in Notification No. FD 25 SRP 91 dated 4-1-93.

The Secretaries to Government are competent to order stepping up of pay under this order. The orders of stepping up of pay shall be issued in the proforma appended to this order and the copy of the same shall be endorsed to the Accountant General in Karnataka and the Secretary to Government (Expenditure), Finance Department.

By Order and in the Name of the Governor of Karnataka

**N.T. NAIK**

Deputy Secretary to Government, Finance Department (Services-2).

**PROFORMA**

**Office Order No.** **Dated:**

The pay of Sri/Smt………………………………………………………………………………… …………………………………………………………………… (Name and Designation) working in the office of the …………………………………………………………………………is stepped up to that of his/her junior Sri/Smt ………………………………………………………………………… (Name and Designation) working in the office of the ……………………………………………………… with effect from ………………………

The next increment of Sri/Smt…………………………………………………………….. (Name and Designation) will accrue on ……………………………

The details of the pay drawn by the senior Government servant and the junior Government servant are given below:-

| | | Senior Government servant | Junior Government servant |
|---|---|---|---|
| 1. | Name and Designation with pay scale | | |
| 2. | Date of regular appointment to Government Service | | |
| 3. | The post held on 1st April 1996 and the pay scale | | |
| 4. | Sl.No. in the Final Gradation List | | |
| 5. | The pay drawn from 1st April 1996 onwards | | |
| 6. | The dates on which the senior and junior Government servants were allowed the benefit of the stagnation increment/s | | |
| 7. | The date of promotion of the senior and junior Government servants to the next higher post | | |
| 8. | Date from which stepping up of pay is admissible to the senior Government servant | | |

PR-1198 **APPOINTING AUTHORITY**

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ತಿದ್ದೋಲೆ ಸಂಖ್ಯೆ: ವಾಕೈ 137 ಕೈಸೇವಿ 2005, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ 137 ಕೈಸೇವಿ 2005, ದಿನಾಂಕ: 20.7.2005ರ ಎರಡನೇ ಪ್ಯಾರಾದಲ್ಲಿ ಅಧಿಕಾರಿಗಳ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳವನ್ನು ನಮೂದಿಸಿರುವ ಪಟ್ಟಿಯ ಕ್ರಮ ಸಂಖ್ಯೆ 4 ರಲ್ಲಿನ ಶ್ರೀಮತಿ ನಂದಿನಿ ವಿ.ಎಸ್., ಸಹಾಯಕ ನಿರ್ದೇಶಕರು, ಎಂಬುದರ ಬದಲಾಗಿ ಶ್ರೀಮತಿ ನಂದಿನಿ ಬಿ.ಎಸ್., ಸಹಾಯಕ ನಿರ್ದೇಶಕರು ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

ಪಿ.ಆರ್.1247

## ಶಿಕ್ಷಣ ಸಚಿವಾಲಯ
## ತಿದ್ದುಪಡಿ
### ಸಂಖ್ಯೆ: ಇಡಿ 112 ಡಿಸಿಇ 2004 (ಭಾಗ), ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2005

ಸಂಖ್ಯೆ: ಇಡಿ 112 ಡಿಸಿಇ 2004 ದಿನಾಂಕ: 13.8.2004ರ ಸರ್ಕಾರಿ ಅಧಿಸೂಚನೆಯಲ್ಲಿನ ಕ್ರಮ ಸಂಖ್ಯೆ: 07 ರಲ್ಲಿ ಜಿಲ್ಲಾ ವಯಸ್ಕರ ಶಿಕ್ಷಣ ಅಧಿಕಾರಿ "ಗುಲ್ಬರ್ಗಾ" ಎಂದಿರುವುದನ್ನು "ಕೊಪ್ಪಳ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮೇರಿ ಜಾಯ್ಸ್**

ಪಿ.ಆರ್.1255 ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ
## ತಿದ್ದುಪಡಿ
### ಸಂಖ್ಯೆ: ಸಿಆಸುಇ 267 ಸಅಸೇ 2005 ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2005

ಅಧಿಸೂಚನೆ ಸಂಖ್ಯೆ: ಸಿಆಸುಇ 267 ಸಅಸೇ 2005, ದಿನಾಂಕ: 11.8.2005ರ ಕ್ರಮ ಸಂಖ್ಯೆ (2)ರಲ್ಲಿ ಬರುವ ಮಾತ್ರ ಇಲಾಖೆ "ಭೂಮಾಪನ ಕಂದಾಯ ವ್ಯವಸ್ಥೆ ಹಾಗೂ ಭೂದಾಖಲೆಗಳ ಇಲಾಖೆ" ಎಂಬುದರ ಬದಲಾಗಿ "ಕಾರ್ಯದರ್ಶಿಗಳ ಕಛೇರಿ, ಕಂದಾಯ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಪಿ. ಪ್ರಭು**

ಪಿ.ಆರ್.1253 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## PERSONNEL AND ADMINISTRATIVE REFORMS SECRETARIAT
## CORRIGENDUM
### No. DPAR 416 SAS 2005 Bangalore, dated: 27th August, 2005

In Government notification of even number dated: 22.8.2005 words "waiting for posting" occuring in first line of para 14, the words "Secretary to Deputy Chief Minister" shall be substituted.

By Order and in the name of the Governor of Karnataka,

**K. SUDHAKARA SHETTY**

PR-1256 Under Secretary to Government, DP&AR (Services-I).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕರ್ನಾಟಕ ಮೃಗಾಲಯ ಪ್ರಾಧಿಕಾರದ ಅಧ್ಯಕ್ಷರನ್ನು ನೇಮಿಸುವ ಬಗ್ಗೆ.

**ಉಲ್ಲೇಖ :**
1. ಮಾನ್ಯ ಮುಖ್ಯ ಮಂತ್ರಿಗಳ ನಡವಳಿ ಸಂಖ್ಯೆ: ಪಿಎಸ್‌ಸಿಎಂ:2071/05, ದಿನಾಂಕ: 21.07.05.
2. ಮಾನ್ಯ ಮುಖ್ಯ ಕಾರ್ಯದರ್ಶಿಯವರ ಕ್ರಮಾಂಕ: ಮುಕಾ. 2710/2005, ದಿನಾಂಕ: 22.07.05.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ರವರ ಪತ್ರ ಸಂಖ್ಯೆ:ಸಿ1:ಜೆಡ್‌ಎಕೆ: ಸಿಆರ್-37: 2005-2006, ದಿನಾಂಕ: 27.7.05.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1) ಮತ್ತು (2) ರನ್ವಯ ಸರ್ಕಾರದ ಕಾರ್ಯದರ್ಶಿ (ಅರಣ್ಯ), ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ರವರು ಕರ್ನಾಟಕ ಮೃಗಾಲಯ ಪ್ರಾಧಿಕಾರದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಿದ್ದರು.

ಮೇಲೆ ಓದಲಾದ ಉಲ್ಲೇಖ (3)ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ರವರು ಸರ್ಕಾರದ ಕಾರ್ಯದರ್ಶಿಗಳು (ಅರಣ್ಯ) ರವರು ಕರ್ನಾಟಕ ಮೃಗಾಲಯ ಪ್ರಾಧಿಕಾರದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಿರುವುದು ಮೆಮೊರಂಡಮ್ ಆಫ್ ಅಸೋಶಿಯೇಷನ್ ನಿಯಮಗಳಿಗೆ ವ್ಯತಿರಿಕ್ತವಾಗಿರುತ್ತದೆಂದು ಹಾಗೂ ಸರ್ಕಾರದ ಆದೇಶ ಸಂಖ್ಯೆ: ಅಪಜೀ 204 ಎಫ್‌ಪಿಸಿ 2002, ದಿನಾಂಕ: 17.05.03 ರನ್ವಯ ಅಧಿಕಾರೇತರ ಸದಸ್ಯರು ಅಧ್ಯಕ್ಷರೆಂದು, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು, ಬೆಂಗಳೂರು ರವರು ಉಪ ಅಧ್ಯಕ್ಷರಾಗಿರುತ್ತಾರೆ. ಅಧಿಕಾರೇತರ ಸದಸ್ಯರನ್ನು ಅಧ್ಯಕ್ಷರೆಂದು ನೇಮಿಸದೇ ಇದ್ದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ರವರು ಕರ್ನಾಟಕ ಮೃಗಾಲಯ ಪ್ರಾಧಿಕಾರದ ಅಧ್ಯಕ್ಷರಾಗಿರುತ್ತಾರೆಂದು ತಿಳಿಸಿರುವ ಮೇರೆಗೆ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಅಪಜೀ 104 ಎಫ್‌ಪಿಸಿ 2005 (ಪಿ), ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೆಮೊರಂಡಮ್ ಆಫ್ ಅಸೋಶಿಯೇಷನ್ ಮತ್ತು ನಿಯಮಾವಳಿಗಳ ಪ್ರಕಾರ ಶ್ರೀ ಎಂ. ಕೆ. ವರ್ಮ, ಭಾ.ಅ.ಸೇ., ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಹಾಗೂ ವನ್ಯಜೀವಿ ಪರಿಪಾಲಕರು, ಕರ್ನಾಟಕ, ಬೆಂಗಳೂರು ರವರನ್ನು ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು ಇದರ ಅಧ್ಯಕ್ಷರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಎಂ. ಮಲ್ಲಿಕಾರ್ಜುನ ಸ್ವಾಮಿ**

ಪಿ.ಆರ್.1144 ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಪ್ರಕರಣ 64(2ಎ)ನ್ನು ಮಂಡ್ಯ ಜಿಲ್ಲಾ ಸಹಕಾರ ಹಾಲು ಒಕ್ಕೂಟ ನಿ., ಮಂಡ್ಯ ಇದಕ್ಕೆ ಸಂಬಂಧಿಸಿದಂತೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ :** 1. ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರ ಪತ್ರ ಸಂಖ್ಯೆ: ಡಿಎವೈ:101: ಜೆಎಂಸಿ: 2004-05 ದಿನಾಂಕ: 29.10.2004.

**ಪ್ರಸ್ತಾವನೆ:**

ಮಂಡ್ಯ ಜಿಲ್ಲಾ ಸಹಕಾರ ಹಾಲು ಒಕ್ಕೂಟ ನಿ. ಮಂಡ್ಯ ಇದರಲ್ಲಿನ ಅವ್ಯವಹಾರಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ಅಡಿಯಲ್ಲಿ ವಿಚಾರಣೆಯನ್ನು ದಿನಾಂಕ: 19.11.2002 ರಂದು ಆದೇಶಿಸಿದ್ದು ವಿಚಾರಣೆಗೆ ನಿಗದಿಪಡಿಸಿದ ಅವಧಿಯು ದಿನಾಂಕ: 19.11.2003 ರಂದು ಮುಕ್ತಾಯವಾಗಿರುತ್ತದೆ. ಈ ವಿಚಾರಣಾ ವರದಿಯನ್ನು ದಿನಾಂಕ: 22.09.2004 ರಂದು ಸ್ವೀಕರಿಸಿರುವುದರಿಂದ ವಿಚಾರಣಾ ವರದಿ ಸಲ್ಲಿಸಲು ಆಗಿರುವ ವಿಳಂಬವನ್ನು ವಿಶೇಷವಾಗಿ ಪರಿಗಣಿಸಿ ದಿನಾಂಕ: 19.11.2003 ರಿಂದ 30.09.2004 ರವರೆಗಿನ ಅವಧಿಗೆ ಪ್ರಕರಣ 121 ರಡಿಯಲ್ಲಿ ವಿನಾಯ್ತಿ ನೀಡಿ ವಿಸ್ತರಿಸಿ ಸೂಕ್ತ ಆದೇಶವನ್ನು ಹೊರಡಿಸಬೇಕೆಂದು ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಇವರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 76 ಸಿಎಲ್ಎಂ 2004 ಬೆಂಗಳೂರು, ದಿನಾಂಕ: 23ನೇ ಜುಲೈ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 64(2ಎ) ಪ್ರಕರಣವು ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಮಂಡ್ಯ ಜಿಲ್ಲಾ ಸಹಕಾರ ಹಾಲು ಒಕ್ಕೂಟ ನಿ., ಮಂಡ್ಯ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ.

**64ರ ಪ್ರಕರಣದಲ್ಲಿ:**

(2ಎ)ನೇ ಉಪ ಪ್ರಕರಣದಲ್ಲಿರುವ "ಆರು ತಿಂಗಳು" ಎಂಬ ಪದಕ್ಕೆ ಬದಲಾಗಿ "ಹನ್ನೆರಡು ತಿಂಗಳು" ಎಂಬುದಾಗಿ ಸೇರಿಸತಕ್ಕದ್ದು.

**ಸೂಚನೆ :** 64(2ಎ)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 30.09.2004ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ, ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 64(2ಎ) ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್.1145

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಕರ್ನಾಟಕ ಸಮುದಾಯ ಆಧಾರಿತ ನಿರ್ವಹಣೆ ಯೋಜನೆಗೆ 2005-06ನೇ ಸಾಲಿಗೆ ಮೊದಲನೆಯ ಅರ್ಧ ವಾರ್ಷಿಕ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 01 ಜಸಂಯೋ 2002, ದಿನಾಂಕ: 15.07.2004.
2. ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ, ಬೆಂಗಳೂರು ಇವರ ದಿನಾಂಕ: 03.06.2005ರ ಪತ್ರ ಸಂಖ್ಯೆ: ಜಸಂಯೋ:ಬೆಂ:ಲೆಕ್ಕ:68:2005-06.

**ಪ್ರಸ್ತಾವನೆ:**

ಜಲ ಸಂವರ್ಧನೆ ಯೋಜನೆಯು ಕಾರ್ಯಗತಗೊಳಿಸುತ್ತಿರುವ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯ ಕಾರ್ಯಕ್ರಮಗಳಿಗೆ 2005-06ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702-00-101-2-80-139 (ಯೋಜನೆ) ಅಡಿ 11916-00 ಲಕ್ಷ ರೂ.ಗಳ ಅನುದಾನ ಒದಗಿಸಲಾಗಿದೆ. ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನೆ ಸಂಘ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ 2005-06ನೇ ಸಾಲಿನಲ್ಲಿ 701 ಕೆರೆಗಳನ್ನು ಈಗಾಗಲೇ ಪುನಶ್ಚೇತನಕ್ಕಾಗಿ ಕೆಲಸಗಳನ್ನು ಪ್ರಾರಂಭಿಸಿರುವುದಾಗಿ ತಿಳಿಸಿದ್ದಾರೆ. ಸದರಿ ಸಂಘವು 2005-06 ರಲ್ಲಿ ಯೋಜನಾ ಕಾರ್ಯಕ್ರಮಗಳಿಗೆ, ಸಿಬ್ಬಂದಿ ಸಂಬಳ, ತರಬೇತಿ ಕಾರ್ಯಕ್ರಮ, ಸಲಹೆದಾರರ ಸಂಭಾವನೆ, ಸರ್ಕಾರೇತರ ಸಂಸ್ಥೆಗಳಿಗೆ ವೆಚ್ಚದ ತಃಖ್ತೆಯನ್ನು ಚುಕ್ತ ಮಾಡಲು ಲೆಕ್ಕ ಶೀರ್ಷಿಕೆ 4702-00-101-2-08-139 (ಯೋಜನೆ) ಅಡಿಯಲ್ಲಿ 2005-06ನೇ ಸಾಲಿಗೆ ನಿಗದಿಪಡಿಸಿರುವ ರೂ.119.16 ಕೋಟಿಗಳ ಆಯವ್ಯಯ ಮೊತ್ತದಲ್ಲಿ ರೂ.60.00 ಕೋಟಿಗಳನ್ನು ಅರ್ಧವಾರ್ಷಿಕ ಅನುದಾನವನ್ನಾಗಿ ಬಿಡುಗಡೆ ಮಾಡಲು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 01 ಜಸಂಯೋ 2002, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಜಲ ಸಂವರ್ಧನೆ ಯೋಜನಾ ಸಂಘವು ಉದ್ದೇಶಿತ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಲುವಾಗಿ 2003-04ನೇ ಸಾಲಿಗೆ ಲೆಕ್ಕ ಶೀರ್ಷಿಕೆ "4702-00-101-2-80-139 (ಯೋಜನೆ)" ಅಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಮೊದಲನೇ ಅರ್ಧ ವಾರ್ಷಿಕ ವೆಚ್ಚಕ್ಕಾಗಿ 4000.00 ಲಕ್ಷ ರೂ.ಗಳನ್ನು (ನಾಲ್ಕು ಸಾವಿರ ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿದೆ.

ಕಾರ್ಯನಿರ್ವಾಹಕ ನಿರ್ದೇಶಕರು, ಜಲ ಸಂವರ್ಧನೆ ಯೋಜನಾ ಸಂಘ, ಬೆಂಗಳೂರು ರವರು ಸಲ್ಲಿಸುವ ಹಣ ಸಂದಾಯ ಸ್ವೀಕೃತಿಯ ಮೇಲೆ ಮೇಲುರುಜು ಮಾಡಲು ವಿಶೇಷ ಕರ್ತವ್ಯಾಧಿಕಾರಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇವರಿಗೆ ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 14.07.2005ರ ಟಿಪ್ಪಣಿ ಸಂಖ್ಯೆ: ಲೋಇ 557 ಆಕೋ-1/2005 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎನ್. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ, (ಸಣ್ಣ ನೀರಾವರಿ).

ಪಿ.ಆರ್.1149

## ಲೋಕೋಪಯೋಗಿ ಸಚಿವಾಲಯ

**ವಿಷಯ :** ರಾಜ್ಯದಲ್ಲಿನ ಕೆಲವು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಶಾ: ಮೇಲ್ದರ್ಜೆ: ಬೆಂ:ಸಇಂ5:34: 2005-06, ದಿನಾಂಕ: 20.05.2005.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಶಾ:ಸೋಪೇ:ಮೇಲ್ದರ್ಜೆ: 2005-06, ದಿನಾಂಕ: 30.07.2005.
3. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ, ಇವರ ಪತ್ರ ಸಂಖ್ಯೆ: ಮುಇಂ(ಉ): ತಾಸ-4: ಸಅ-1:2005-06,:4299, ದಿನಾಂಕ: 27.07.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಹಾಗೂ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ರಸ್ತೆಗಳು ಅನೇಕ ಸ್ಥಳಗಳಿಗೆ ಹೋಗಿ ಸೇರುವ ಮುಖ್ಯ ರಸ್ತೆಯಾಗಿರುತ್ತದೆ. ಈ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗುತ್ತದೆ. ಆದುದರಿಂದ ಈ ಹಳ್ಳಿ ರಸ್ತೆಯನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಹಾಗೂ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1. | **ಬೆಂಗಳೂರು ನಗರ**<br>ಬೆಂಗಳೂರು ಆನೇಕಲ್ ಬನ್ನೇರುಘಟ್ಟ ರಸ್ತೆಯಿಂದ ಶಿವನಹಳ್ಳಿ ಸೇರುವ ರಸ್ತೆ. | 10.20 |
| 2. | **ಬೆಂಗಳೂರು ಗ್ರಾಮಾಂತರ ಜಿಲ್ಲೆ**<br>ರಾಮನಗರ ಮಂಚನಬೆಲೆ ರಸ್ತೆ. | 22.00 |
| 3. | ಹೊಸಕೋಟೆ ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ 207 ರಿಂದ ಜೋಗದ ಹೊಸಹಳ್ಳಿ, ಭೀಮಂಡಹಳ್ಳಿ, ಮುತಕೂರು ಮಾರ್ಗವಾಗಿ ಬೆಳ್ಳಿಕೆರೆ ಸೇರುವ ರಸ್ತೆ. | 7.60 |
| 4. | **ತುಮಕೂರು ಜಿಲ್ಲೆ**<br>ಕುಣಿಗಲ್ ತಾಲ್ಲೂಕು ಕೊತ್ತಗೆರೆ ಚೊಟ್ಟನಹಳ್ಳಿ ಪಿ.ಡಬ್ಲ್ಯೂಡಿ ರಸ್ತೆಯಿಂದ ಬಂಡಿತಿಮ್ಮನಪಾಳ್ಯ ಶೆಟ್ಟೀಬೀಡು, ಯಳವರಹಟ್ಟಿ ತೆಂಗಿನಮರದಪಾಳ್ಯ ಶಿಡ್ಲನಹಟ್ಟಿ ಮುಖಾಂತರ ಅರಳೇಮರದ ಗೇಟಿಗೆ ಸೇರುವ ರಸ್ತೆ. | 9.00 |
| 5. | **ಕೊಡಗು ಜಿಲ್ಲೆ**<br>ಸೋಮವಾರಪೇಟೆ ತಾಲ್ಲೂಕು ಚೀರಳ ಶ್ರೀಮಂಗಲ ಪೈಸಾರಿ ಹಳ್ಳಿ ರಸ್ತೆ. | 5.80 |
| 6. | **ಶಿವಮೊಗ್ಗ ಜಿಲ್ಲೆ**<br>ತೀರ್ಥಹಳ್ಳಿ ತಾಲ್ಲೂಕು ತೂದೂರು-ದೊಡ್ಡಮನೆ-ಶಂಕರಾಪುರ ರಸ್ತೆ. | 3.60 |
| 7. | **ಬೀದರ್ ಜಿಲ್ಲೆ**<br>ಜಹೀರಾಬಾದ-ನಾಂದೇಡ್ ರಾಜ್ಯ ಹೆದ್ದಾರಿ 4 ರಿಂದ ಚೊಂಡಿ ಗ್ರಾಮಕ್ಕೆ ಕೂಡು ರಸ್ತೆ. | 0.50 |
| 8. | ಜಹೀರಾಬಾದ-ನಾಂದೇಡ್ ರಾಜ್ಯ ಹೆದ್ದಾರಿ 4 ರಿಂದ ಲಾಲ್‌ಬಾಗ್ ಗ್ರಾಮಕ್ಕೆ ಕೂಡು ರಸ್ತೆ. | 0.60 |
| 9. | ಜಹೀರಾಬಾದ-ನಾಂದೇಡ್ ರಾಜ್ಯ ಹೆದ್ದಾರಿ 4 ರಿಂದ ಲಾಡಗೇರಿ ಗ್ರಾಮಕ್ಕೆ ಕೂಡು ರಸ್ತೆ. | 0.40 |
| 10. | ಬೀದರ್-ಹುಮ್ನಾಬಾದ್ ರಾಜ್ಯ ಹೆದ್ದಾರಿ ಸಂಖ್ಯೆ: 105 ರಿಂದ ಕೊಳಾರ (ಬಿ) ಕೂಡು ರಸ್ತೆ. | 1.50 |
| 11. | ಬೀದರ್-ಹುಮ್ನಾಬಾದ್ ರಾಜ್ಯ ಹೆದ್ದಾರಿ ಸಂಖ್ಯೆ: 105 ರಿಂದ ಬಕಚೌಡಿ ಗ್ರಾಮಕ್ಕೆ ಕೂಡು ರಸ್ತೆ. | 3.00 |
| 12. | ವನಮಾರಪಲ್ಲಿ-ರಾಯಚೂರು ರಾಜ್ಯ ಹೆದ್ದಾರಿ ಸಂಖ್ಯೆ: 15 ರಿಂದ ಐಯಾಸಪೂರ ಕೂಡು ರಸ್ತೆ. | 1.00 |
| 13. | ಬೀದರ-ಮನಹಳ್ಳಿ-ಭಂಗೂರ ಜಿಲ್ಲಾ ಮುಖ್ಯ ರಸ್ತೆಯಿಂದ ನಾಗೂರ ಕೂಡು ರಸ್ತೆ. | 1.00 |
| 14. | ಕಮಾಲನಗರ-ಗೂನಳ್ಳಿ ರಾಜ್ಯ ಹೆದ್ದಾರಿ 4 ರಿಂದ ಗೂನಳ್ಳಿ ಗ್ರಾಮಕ್ಕೆ ಕೂಡು ರಸ್ತೆ. | 2.00 |
| 15. | ಬೀದರ-ಮನಹಳ್ಳಿ-ಭಂಗೂರ ಜಿಲ್ಲಾ ಮುಖ್ಯ ರಸ್ತೆಯಿಂದ ರಾಜಗೀರಾ ಕೂಡು ರಸ್ತೆ. | 2.00 |
| 16. | ಗದಗಿ-ಚಿಲ್ಲರ್ಗಿ ಜಿಲ್ಲಾ ಮುಖ್ಯ ರಸ್ತೆಯಿಂದ ಮಿರ್ಜಾಪುರ ಕೂಡು ರಸ್ತೆ. | 1.00 |
| 17. | ಬೀದರ-ಚಿಲ್ಲರ್ಗಿ ಜಿಲ್ಲಾ ಮುಖ್ಯ ರಸ್ತೆಯಿಂದ ಅಲ್ಲಾಪುರ ಕೂಡು ರಸ್ತೆ. | 2.00 |
| 18. | ಸಿಂದೋಲ-ತಡಪಲ್ಲಿ ರಸ್ತೆ. | 2.00 |

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 19. | ಬೀದರ-ಮನಹಳ್ಳಿ-ಭಂಗೂರ ಜಿಲ್ಲಾ ಮುಖ್ಯ ರಸ್ತೆಯಿಂದ ಚಿಟ್ಟಾ ಗ್ರಾಮಕ್ಕೆ ಕೂಡು ರಸ್ತೆ. | 2.50 |
| 20. | ಬೀದರ-ಮನಹಳ್ಳಿ-ಭಂಗೂರ ಜಿಲ್ಲಾ ಮುಖ್ಯ ರಸ್ತೆಯಿಂದ ಘೋಡೆಪಳ್ಳಿ ಗ್ರಾಮಕ್ಕೆ ಕೂಡು ರಸ್ತೆ. | 3.00 |
| | ಒಟ್ಟು | 80.70 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 100 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಹಾಗೂ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1. | **ಬೆಂಗಳೂರು ನಗರ**<br>ಬೆಂಗಳೂರು ಆನೇಕಲ್ ಬನ್ನೇರುಘಟ್ಟ ರಸ್ತೆಯಿಂದ ಶಿವನಹಳ್ಳಿ ಸೇರುವ ರಸ್ತೆ. | 10.20 |
| 2. | **ಬೆಂಗಳೂರು ಗ್ರಾಮಾಂತರ ಜಿಲ್ಲೆ**<br>ರಾಮನಗರ ಮಂಚನಬೆಲೆ ರಸ್ತೆ. | 22.00 |
| 3. | ಹೊಸಕೋಟೆ ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ 207 ರಿಂದ ಜೋಗದ ಹೊಸಹಳ್ಳಿ, ಭೀಮಂಡಹಳ್ಳಿ, ಮುತಕೂರು ಮಾರ್ಗವಾಗಿ ಬೆಳ್ಳಿಕೆರೆ ಸೇರುವ ರಸ್ತೆ. | 7.60 |
| 4. | **ತುಮಕೂರು ಜಿಲ್ಲೆ**<br>ಕುಣಿಗಲ್ ತಾಲ್ಲೂಕು ಕೊತ್ತಗೆರೆ ಚೊಟ್ಟನಹಳ್ಳಿ ಪಿ.ಡಬ್ಲ್ಯೂಡಿ ರಸ್ತೆಯಿಂದ ಬಂಡಿತಿಮ್ಮನಪಾಳ್ಯ ಶೆಟ್ಟೀಬೀಡು, ಯಳವರಹಟ್ಟಿ ತೆಂಗಿನಮರದಪಾಳ್ಯ ಶಿಡ್ಲನಹಟ್ಟಿ ಮುಖಾಂತರ ಅರಳೀಮರದ ಗೇಟಿಗೆ ಸೇರುವ ರಸ್ತೆ. | 9.00 |
| 5. | **ಕೊಡಗು ಜಿಲ್ಲೆ**<br>ಸೋಮವಾರಪೇಟೆ ತಾಲ್ಲೂಕು ಚೇರಳ ಶ್ರೀಮಂಗಲ ಪೈಸಾರಿ ಹಳ್ಳಿ ರಸ್ತೆ. | 5.80 |
| 6. | **ಶಿವಮೊಗ್ಗ ಜಿಲ್ಲೆ**<br>ತೀರ್ಥಹಳ್ಳಿ ತಾಲ್ಲೂಕು ತೂದೂರು-ದೊಡ್ಡಮನೆ-ಶಂಕರಾಪುರ ರಸ್ತೆ. | 3.60 |
| 7. | **ಬೀದರ್ ಜಿಲ್ಲೆ**<br>ಜಹೀರಾಬಾದ-ನಾಂದೇಡ್ ರಾಜ್ಯ ಹೆದ್ದಾರಿ 4 ರಿಂದ ಚೊಂಡಿ ಗ್ರಾಮಕ್ಕೆ ಕೂಡು ರಸ್ತೆ. | 0.50 |
| 8. | ಜಹೀರಾಬಾದ-ನಾಂದೇಡ್ ರಾಜ್ಯ ಹೆದ್ದಾರಿ 4 ರಿಂದ ಲಾಲ್‌ಬಾಗ್ ಗ್ರಾಮಕ್ಕೆ ಕೂಡು ರಸ್ತೆ. | 0.60 |
| 9. | ಜಹೀರಾಬಾದ-ನಾಂದೇಡ್ ರಾಜ್ಯ ಹೆದ್ದಾರಿ 4 ರಿಂದ ಲಾಡಗೇರಿ ಗ್ರಾಮಕ್ಕೆ ಕೂಡು ರಸ್ತೆ. | 0.40 |
| 10. | ಬೀದರ್-ಹುಮ್ನಾಬಾದ್ ರಾಜ್ಯ ಹೆದ್ದಾರಿ ಸಂಖ್ಯೆ: 105 ರಿಂದ ಕೊಳಾರ (ಬಿ) ಕೂಡು ರಸ್ತೆ. | 1.50 |
| 11. | ಬೀದರ್-ಹುಮ್ನಾಬಾದ್ ರಾಜ್ಯ ಹೆದ್ದಾರಿ ಸಂಖ್ಯೆ: 105 ರಿಂದ ಬಕಚೌಡಿ ಗ್ರಾಮಕ್ಕೆ ಕೂಡು ರಸ್ತೆ. | 3.00 |
| 12. | ವನಮಾರಪಲ್ಲಿ-ರಾಯಚೂರು ರಾಜ್ಯ ಹೆದ್ದಾರಿ ಸಂಖ್ಯೆ: 15 ರಿಂದ ಐಯಾಸಪೂರ ಕೂಡು ರಸ್ತೆ. | 1.00 |
| 13. | ಬೀದರ-ಮನಹಳ್ಳಿ-ಭಂಗೂರ ಜಿಲ್ಲಾ ಮುಖ್ಯ ರಸ್ತೆಯಿಂದ ನಾಗೂರ ಕೂಡು ರಸ್ತೆ. | 1.00 |
| 14. | ಕಮಾಲನಗರ-ಗೂನಳ್ಳಿ ರಾಜ್ಯ ಹೆದ್ದಾರಿ 4 ರಿಂದ ಗೂನಳ್ಳಿ ಗ್ರಾಮಕ್ಕೆ ಕೂಡು ರಸ್ತೆ. | 2.00 |
| 15. | ಬೀದರ-ಮನಹಳ್ಳಿ-ಭಂಗೂರ ಜಿಲ್ಲಾ ಮುಖ್ಯ ರಸ್ತೆಯಿಂದ ರಾಜಗೀರಾ ಕೂಡು ರಸ್ತೆ. | 2.00 |
| 16. | ಗದಗಿ-ಚಿಲ್ಲರ್ಗಿ ಜಿಲ್ಲಾ ಮುಖ್ಯ ರಸ್ತೆಯಿಂದ ಮಿರ್ಜಾಪುರ ಕೂಡು ರಸ್ತೆ. | 1.00 |
| 17. | ಬೀದರ-ಚಿಲ್ಲರ್ಗಿ ಜಿಲ್ಲಾ ಮುಖ್ಯ ರಸ್ತೆಯಿಂದ ಅಲ್ಲಾಸಪುರ ಕೂಡು ರಸ್ತೆ. | 2.00 |
| 18. | ಸಿಂದೋಲ-ತಡಪಲ್ಲಿ ರಸ್ತೆ. | 2.00 |
| 19. | ಬೀದರ-ಮನಹಳ್ಳಿ-ಭಂಗೂರ ಜಿಲ್ಲಾ ಮುಖ್ಯ ರಸ್ತೆಯಿಂದ ಚಿಟ್ಟಾ ಗ್ರಾಮಕ್ಕೆ ಕೂಡು ರಸ್ತೆ. | 2.50 |
| 20. | ಬೀದರ-ಮನಹಳ್ಳಿ-ಭಂಗೂರ ಜಿಲ್ಲಾ ಮುಖ್ಯ ರಸ್ತೆಯಿಂದ ಘೋಡೆಪಳ್ಳಿ ಗ್ರಾಮಕ್ಕೆ ಕೂಡು ರಸ್ತೆ. | 3.00 |
| | **ಒಟ್ಟು** | **80.70** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್.1150

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ, (ಸಂಪರ್ಕ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಎನ್. ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ, ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ: 114: ಎಸ್‌ಇಎನ್ 2004 ದಿನಾಂಕ: 11.2.2005.
2. ಶ್ರೀ ಎನ್. ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 21.07.2005.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರವಾಸೋದ್ಯಮ ಇಲಾಖೆಯಲ್ಲಿನ ಪ್ರವಾಸಿ ಪ್ರವರ್ತಕರಾಗಿ ಕಾರ್ಯನಿರ್ವಹಿಸುತ್ತಿದ್ದವರನ್ನು ಸರ್ಕಾರಿ

ಸೇವೆಯಲ್ಲಿ ವಿಲೀನಗೊಳಿಸುವ ಪ್ರಸ್ತಾವನೆಗೆ ಆರ್ಥಿಕ ಇಲಾಖೆ, ಸಿಆಸುಇ (ಸೇವಾ ನಿಯಮ) ಹಾಗೂ ಕಾನೂನು ಇಲಾಖೆಯೊಡನೆ ಸಮಾಲೋಚನೆಯಲ್ಲಿರುವಾಗಲೇ ಮೇಲಾಧಿಕಾರಿಗಳ ಯಾವುದೇ ಸೂಚನೆಯಿಲ್ಲದೆ ಹಾಗೂ ಅವರಿಂದ ಅನುಮೋದನೆ ಪಡೆಯದೆ 42 ಪ್ರವಾಸೋದ್ಯಮ ಪ್ರವರ್ತಕರ ಸೇವೆಯನ್ನು ಖಾಯಂಗೊಳಿಸಿ ಆದೇಶ ಹೊರಡಿಸಿರುವ ಆರೋಪಕ್ಕಾಗಿ ಶ್ರೀ ಡಿ. ಎಸ್. ಶಿವಣ್ಣ, ನಿವೃತ್ತ ಉಪ ಕಾರ್ಯದರ್ಶಿ, ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 11.2.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಎನ್. ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2)ರಲ್ಲಿ ಓದಲಾದ ದಿನಾಂಕ: 21.07.2005ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 114 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2005**

ಸರ್ಕಾರವು ಶ್ರೀ ಎನ್. ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.4.1998 ರನ್ವಯ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್. ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3).

ಪಿ.ಆರ್.1151

## ಶಿಕ್ಷಣ ಸಚಿವಾಲಯ

**ವಿಷಯ :** 2004-05ನೇ ಸಾಲಿನಲ್ಲಿ ಕೈಗೊಂಡ ಉಚಿತ ಸಮವಸ್ತ್ರ ಸರಬರಾಜು ಮೌಲ್ಯಮಾಪನ ವರದಿಯ ಶಿಫಾರಸ್ಸಿನಂತೆ ಲಿಂಗಬೇದ ತಾರತಮ್ಮ ಕುರಿತಂತೆ ರಾಜ್ಯ ಮಟ್ಟದ ಸಲಹಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಐಸೆಕ್ ಸಂಸ್ಥೆಯ ಮೌಲ್ಯಮಾಪನಾ ವರದಿ ದಿನಾಂಕ: 27.11.2004.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಅ4(1) ಸಮವಸ್ತ್ರ ಮೌಲ್ಯಮಾಪನ/ 32/ 2004-05 ದಿನಾಂಕ: 29.04.2005.

**ಪ್ರಸ್ತಾವನೆ:**

ರಾಜ್ಯದಾದ್ಯಂತ 2004-05ನೇ ಸಾಲಿನಲ್ಲಿ ಕೈಗೊಂಡ ವಿದ್ಯಾವಿಕಾಸ ಯೋಜನೆಯಡಿಯಲ್ಲಿನ ಉಚಿತಸಮವಸ್ತ್ರ ಸರಬರಾಜು ಯೋಜನಾ ಕಾರ್ಯದ ಮೌಲ್ಯಮಾಪನ ನಡೆಸಿದ ಬೆಂಗಳೂರಿನ ಐಸೆಕ್ ಸಂಸ್ಥೆಯು ಮೇಲೆ (1)ರಲ್ಲಿ ಓದಲಾದ ದಿನಾಂಕ: 27.11.2004 ರಂದು ತನ್ನ ವರದಿ ಸಲ್ಲಿಸಿ ಇತರ ಶಿಫಾರಸ್ಸುಗಳೊಡನೆ ಲಿಂಗಬೇದ ತಾರತಮ್ಯ ಕುರಿತಂತೆ ರಾಜ್ಯಮಟ್ಟದ ಸಲಹಾ ಸಮಿತಿ ರಚಿಸುವಂತೆ ಶಿಫಾರಸ್ಸು ಮಾಡಿದೆ. ಇದರನ್ವಯ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 29.04.2005ರ ತಮ್ಮ ಪತ್ರದಲ್ಲಿ ಈ ಬಗ್ಗೆ ಇಲಾಖೆಯ ಅಧಿಕಾರಿಗಳನ್ನೊಳಗೊಂಡ ರಾಜ್ಯಮಟ್ಟದ ಸಲಹಾ ಸಮಿತಿಯನ್ನು ರಚಿಸುವಂತೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 197 ಯೋಯೋಕಾ 2005 ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2005**
**(ಇಡಿ 34 ಸ್ವೀಮರ (ಯೂನಿಕ್) 2005, ದಿನಾಂಕ: 2ನೇ ಆಗಸ್ಟ್ 2005)**

ಸರ್ಕಾರವು ಸಮವಸ್ತ್ರ ಸರಬರಾಜು ಕುರಿತಂತೆ ಐಸೆಕ್ ಸಂಸ್ಥೆಯು ಮಾಡಿರುವ ಶಿಫಾರಸ್ಸಿಗನುಗುಣವಾಗಿ ಲಿಂಗಬೇದ ತಾರತಮ್ಯ ಕುರಿತಂತೆ ಶಿಕ್ಷಣ ಇಲಾಖೆಯ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ರಾಜ್ಯಮಟ್ಟದ ಸಲಹಾ ಸಮಿತಿಯನ್ನು ರಚಿಸುತ್ತದೆ.

1. ಶ್ರೀಮತಿ ಗಾಯಿತ್ರಿದೇವಿ ದತ್, ಎಂ.ಡಿ, ನಿರ್ದೇಶಕಿ, ರೀಜನಲ್ ಇನ್ಸ್‌ಟ್ಯೂಟ್ ಆಫ್ ಇಂಗ್ಲೀಷ್, ಬೆಂಗಳೂರು. - ಅಧ್ಯಕ್ಷರು
2. ಶ್ರೀಮತಿ ಎಸ್. ಎನ್. ಪ್ರತಿಮ, ಉಪ ನಿರ್ದೇಶಕರು (ಸಂಸ್ಕೃತ) ಉರ್ದು ಮತ್ತು ಇತರ ಅಲ್ಪಸಂಖ್ಯಾತ ಭಾಷಾ ಸಂಸ್ಥೆಗಳ ನಿರ್ದೇಶನಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿ ಬೆಂಗಳೂರು - ಸದಸ್ಯರು
3. ಶ್ರೀಮತಿ ವೀಣಾ ಆರ್. ನಾಯಕ್, ಉಪ ನಿರ್ದೇಶಕರು ಉರ್ದು ಮತ್ತು ಇತರ ಅಲ್ಪಸಂಖ್ಯಾತ ಸಂಸ್ಥೆಗಳ ನಿರ್ದೇಶನಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು - ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ),
ಶಿಕ್ಷಣ ಇಲಾಖೆ.

ಪಿ.ಆರ್.1152

**FOREST, ECOLOGY AND ENVIRONMENT SECRETARIAT**
**CORRIGENDUM**
**No. FEE: 58: FGL: 2005 Bangalore, dated: 29th July 2005.**

In the order portion of the G.O. No. FEE 40 FGL 2003, dated: 10.2.2005, for the condition No.2, the following condition shall be substituted.

"(2) The compensatory afforestation shall be raised over 4.00 ha. of degraded forest land at the cost of user agency".

By Order and in the name of the Governor of Karnataka,
PR-1153
**S. R. VATSALA**
Under Secretary to Government,
Forest, Ecology and Environment Department.

**ನಗರಾಭಿವೃದ್ಧಿ ಸಚಿವಾಲಯ**
**ತಿದ್ದುಪಡಿ**
**ಸಂಖ್ಯೆ: ನಅಇ 133 ಬೆಂರೂಪ್ರಾ 2005 ಬೆಂಗಳೂರು, ದಿನಾಂಕ: 20ನೇ ಜುಲೈ 2005**

ಅಧಿಸೂಚನೆ ಸಂಖ್ಯೆ: ನಅಇ 133 ಬೆಂಮಪ್ರಾ 2005 ದಿನಾಂಕ: 20.07.2005ರಲ್ಲಿ ಶ್ರೀ ಆರ್. ಜೆ. ಪಾಟೀಲ್ ಇವರ ಸ್ಥಾನದಲ್ಲಿ ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ ರವರನ್ನು ನೇಮಿಸಿರುವುದನ್ನು ಮಾರ್ಪಡಿಸಿ ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರದ ಶ್ರೀ ರಾಜೇಂದ್ರ ಬಿ. ದೇಸಾಯಿ, ಅಧ್ಯಕ್ಷರು ಇವರನ್ನು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್.1155
**ಶಾಂತಾರಾಂ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ನಗರಾಭಿವೃದ್ಧಿ ಇಲಾಖೆ.

**LABOUR SECRETARIAT**
**CORRIGENDUM**
**No. LD: 170: ETI: 2004 Bangalore, dated: 6th August 2005.**

In the order portion of Government Order No. LD 170 ETI 2004 dated: 13.06.2005, in the third line for the words " with effect from 19.3.2004." the words "with effect from 20.07.2004" shall be substituted.

**M. P. NAGARAJA**
PR-1156
Desk Officer,
Labour Department, (Employment and Training).

**PERSONNEL AND ADMINISTRATIVE REFORMS SECRETARIAT**
**CORRIGENDUM**
**No. DPAR: 178: SME: 2005 Bangalore, dated: 3rd August 2005.**

In the Government Order of even number dated: 21.07.2005, the figures "from 23.08.2005 to 30.06.2006" the words "from 23.08.2005 to 22.08.2006" shall be and shall always be deemed to have been substituted.

By Order and in the Name of the Governor of Karnataka,
PR-1157
**K. SHUDHAKARA SHETTY**
Under Secretary to Government,
DPAR (Services-1).

**ಲೋಕೋಪಯೋಗಿ ಸಚಿವಾಲಯ**
**ತಿದ್ದುಪಡಿ**
**ಸಂಖ್ಯೆ: ಲೋಇ 89 ಪಿಡಬ್ಲ್ಯುಸಿ 2002 ಬೆಂಗಳೂರು, ದಿನಾಂಕ: 27ನೇ ಜುಲೈ 2005**

ಸರ್ಕಾರದ ಆದೇಶ ಸಂಖ್ಯೆ: ಲೋಇ 89 ಪಿಡಬ್ಲ್ಯೂಸಿ 2002 ದಿನಾಂಕ: 17.5.2003ರ ಆದೇಶ ಭಾಗದಲ್ಲಿ ಶ್ರೀ ಡಿ. ಶಿವರಾಮಯ್ಯ, ಪದವೀಧರ ಇಂಜಿನಿಯರ್‌ರವರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ "ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ಪರಿಗಣಿಸುವುದು" ಎಂದು ಆದೇಶಿಸಲಾಗಿದ್ದು ನಂತರ ದಿನಾಂಕ: 3.11.2004ರ ತಿದ್ದುಪಡಿ ಆದೇಶದಲ್ಲಿ ಸತತ 10 ವರ್ಷಗಳ ದಿನಗೂಲಿ ಸೇವೆಯನ್ನು ಪೂರೈಸಿದ ದಿನಾಂಕದಿಂದಲೇ "ಆರ್ಥಿಕ (ಕಾಲ್ಪನಿಕವಾಗಿ) ಹಾಗೂ ಸೇವಾ ಹಿರಿತನ ಸೌಲಭ್ಯ" ಗಳನ್ನು ಪಡೆಯಲು ಅರ್ಹರಾಗಿರುತ್ತಾರೆಂದು, ಆದರೆ ಯಾವುದೇ ಹಿಂದಿನ ಬಾಕಿ ವೇತನಕ್ಕೆ ಅರ್ಹರಲ್ಲವೆಂದು ಆದೇಶ ಸಂಖ್ಯೆ: ಲೋಇ 89 ಪಿಡಬ್ಲೂಸಿ 02 ದಿನಾಂಕ: 3.11.2004 ರಲ್ಲಿ ತಿದ್ದುಪಡಿ ಮಾಡಲಾಗಿತ್ತು. ಈ ಪ್ರಕರಣವನ್ನು ಪುನರಾವಲೋಕಿಸಲಾಗಿದೆ. ಅದರಂತೆ ಸದರಿ ತಿದ್ದುಪಡಿಗೆ ಪ್ರತಿಯಾಗಿ "ಸದರಿ ನೌಕರರು ಸತತ 10 ವರ್ಷಗಳ ದಿನಗೂಲಿ ಸೇವೆಯನ್ನು ಪೂರೈಸಿ ಸಕ್ರಮಗೊಂಡ ದಿನಾಂಕದಿಂದ ಅಂದರೆ 20.10.1997 ರಿಂದಲೇ ಸೇವಾ ಹಿರಿತನ ಹಾಗೂ ಬಾಕಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆಂದು" ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್.1158
**ಎಸ್. ಚಂದ್ರಶೇಖರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ. (ಸೇವೆಗಳು-ಸಿ).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಪುರಸಭಾ ನೌಕರರನ್ನು ಕರ್ನಾಟಕ ಮುನಿಸಿಪಾಲಿಟಿ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳೆಂದು (ಕೆಎಂಎಎಸ್) ಆದೇಶಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ನಅಇ 258 ಇಎಂಸಿ 94, ದಿನಾಂಕ: 9.12.98.

2. ಪೌರಾಡಳಿತ ನಿರ್ದೇಶನಾಯಲಯದ ಪತ್ರ ಸಂಖ್ಯೆ:ಪೌನಿ: ಕೆಎಂಎಎಸ್:ಸಿಆರ್:9/2005-06 ದಿನಾಂಕ: 21.07.05.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶ ಸಂಖ್ಯೆ: ನಅಇ 258 ಇಎಂಸಿ 94, ದಿನಾಂಕ: 9.12.98ರ ಕಾರ್ಯಕಾರಿ ಆದೇಶದ ಪ್ರಕಾರ ಈ ಕೆಳಕಂಡ ವೃಂದಗಳಲ್ಲಿ 5 ವರ್ಷ ಸೇವೆ ಸಲ್ಲಿಸಿದ ನೌಕರರನ್ನು ಶೇಕಡಾವಾರು ಸಂಖ್ಯೆಯಲ್ಲಿ ಕರ್ನಾಟಕ ಪೌರಾಡಳಿತ ಸೇವಾ ವೃಂದದ ಮುಖ್ಯಾಧಿಕಾರಿ ಶ್ರೇಣಿ-2ರ ಹುದ್ದೆಗೆ ಸೇರ್ಪಡೆ ಮಾಡಲು ಈ ಕೆಳಕಂಡಂತೆ ಅವಕಾಶವನ್ನು ಕಲ್ಪಿಸಲಾಗಿದೆ.

1) ನೇರ ನೇಮಕಾತಿ ಮೂಲಕ ಶೇಕಡ 33.33 — 33 ಹುದ್ದೆಗಳು
2) ಪೌರ ಸೇವಾ ವೃಂದದ ನೌಕರರಿಂದ ಆಯ್ಕೆ
   ಅ) ಕಛೇರಿ ವ್ಯವಸ್ಥಾಪಕರು ಶೇಕಡ 24.76 — 25 ಹುದ್ದೆಗಳು
   ಆ) ಕಂದಾಯ ಅಧಿಕಾರಿಗಳು ಶೇಕಡ 19.05 — 19 ಹುದ್ದೆಗಳು
   ಇ) ಹಿರಿಯ ಆರೋಗ್ಯ ನಿರೀಕ್ಷಕರು ಶೇಕಡ 22.85 — 23 ಹುದ್ದೆಗಳು

ಒಟ್ಟು 100 ಹುದ್ದೆಗಳು

ಮೇಲೆ ಓದಲಾದ (2)ರ ಪತ್ರದಲ್ಲಿ ಪೌರಾಡಳಿತ ನಿರ್ದೇಶಕರು ಬೆಂಗಳೂರು ಇವರು ಹಾಲಿ 2ನೇ ಶ್ರೇಣಿ ಮುಖ್ಯಾಧಿಕಾರಿ ವೃಂದ ಬಲದಲ್ಲಿ ಮಂಜೂರಾದ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ಸಂಖ್ಯೆ ಹಾಗೂ ಕೊರತೆ ಇರುವ ಅಧಿಕಾರಿಗಳ ಸಂಖ್ಯೆ ಈ ಕೆಳಕಂಡಂತೆ ಇರುತ್ತದೆಂದು ತಿಳಿಸಿರುತ್ತಾರೆ.

| ಕ್ರಮ ಸಂಖ್ಯೆ | ನಿಯಮಾನುಸಾರ ಅನುಪಾತ | ಒಟ್ಟು ಹುದ್ದೆಗಳ ಸಂಖ್ಯೆ | 2ನೇ ಶ್ರೇಣಿ ಮುಖ್ಯಾಧಿಕಾರಿ ವೃಂದದಲ್ಲಿ ಕರ್ತವ್ಯ ಮಾಡುತ್ತಿರುವರ ಸಂಖ್ಯೆ | ಭರ್ತಿ ಮಾಡಬೇಕಾದ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ನೇರ ನೇಮಕಾತಿ 33 1/3% | 31 ಹುದ್ದೆಗಳು | - | 31 |
| 2 | ಕಛೇರಿ ವ್ಯವಸ್ಥಾಪಕರು 24.76% | 24 ಹುದ್ದೆಗಳು | 23 | 1 |
| 3 | ಕಂದಾಯಾಧಿಕಾರಿಗಳು 19.05% | 18 ಹುದ್ದೆಗಳು | 18 | 0 |
| 4 | ಹಿರಿಯ ಆರೋಗ್ಯ ನಿರೀಕ್ಷಕರು 22.85% | 21 ಹುದ್ದೆಗಳು | 21 | 0 |
| | **ಒಟ್ಟು** | **94 ಹುದ್ದೆಗಳು** | | |

ಅದರಂತೆ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿಮಾಡಲು ಈಗಾಗಲೇ ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಿ, ಉಳಿದಂತೆ ಸಂಬಂಧಿಸಿದ ಕೇಡರ್‌ನಲ್ಲಿ ಖಾಲಿ ಇರುವ ಹುದ್ದೆಗಳಿಗೆ ಅರ್ಹ ಪುರಸಭೆ ನೌಕರರುಗಳನ್ನು ಆಯ್ಕೆ ಮಾಡಬೇಕೆಂದು ತಿಳಿಸಿ, ಕಛೇರಿ ವ್ಯವಸ್ಥಾಪಕ ವೃಂದದಲ್ಲಿರುವ ಶ್ರೀ ಹೆಚ್. ಆರ್. ಸತ್ಯನಾರಾಯಣರಾವ್, ಇವರನ್ನು ಕೆಎಂಎಎಸ್. ವೃಂದಕ್ಕೆ ವಿಲೀನಗೊಳಿಸಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳನ್ನು ಗಮನಿಸಿ ಸರ್ಕಾರವು ಪೌರಾಡಳಿತ ನಿರ್ದೇಶನಾಲಯ ರವರು ಶಿಫಾರಸ್ಸು ಮಾಡಿರುವ ನಿಯಮಾನುಸಾರ ಅರ್ಹತೆ ಹೊಂದಿರುವ ಶ್ರೀ ಹೆಚ್. ಆರ್. ಸತ್ಯನಾರಾಯಣರಾವ್, ಇವರನ್ನು ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ವೇತನ ಶ್ರೇಣಿ 4575-8400ರಲ್ಲಿ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳ (ಮುಖ್ಯಾಧಿಕಾರಿ ಶ್ರೇಣಿ-2) ಹುದ್ದೆಗೆ ವಿಲೀನಗೊಳಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ: ನಅಇ 62 ಇಎಂಸಿ 2003, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2005

ಸರ್ಕಾರವು ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಪೌರಾಡಳಿತ ನಿರ್ದೇಶನಾಲಯದಲ್ಲಿ ಕಛೇರಿ ವ್ಯವಸ್ಥಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಹೆಚ್. ಆರ್. ಸತ್ಯನಾರಾಯಣರಾವ್ ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಪೌರ ಸೇವಾ ವೃಂದದ ಅಧಿಕಾರಿಗಳೆಂದು ವೇತನ ಶ್ರೇಣಿ 4575-8400ರ (ಮುಖ್ಯಾಧಿಕಾರಿ ಶ್ರೇಣಿ-2) ಹುದ್ದೆಯಲ್ಲಿ ಸ್ಥಾನ ಮಾನವನ್ನು ನೀಡಿ, ವೇತನವನ್ನೊಳಗೊಂಡಂತೆ ಎಲ್ಲಾ ಸೇವಾ ಸೌಲಭ್ಯಗಳನ್ನು ಕೆಎಂಎಎಸ್ ಅಧಿಕಾರಿಗಳಿಗೆ ಅನ್ವಯವಾಗುವ ಸೇವಾ ನಿಯಮಾವಳಿಗೊಳಪಟ್ಟು ಹಾಗೂ ಈ ಕೆಳಕಂಡ ನಿಬಂಧನೆಗೊಳಪಡಿಸಿ ವಿಲೀನಗೊಳಿಸಿ ಆದೇಶಿಸಲಾಗಿದೆ.

1. ಶ್ರೀ ಹೆಚ್. ಆರ್. ಸತ್ಯನಾರಾಯಣರಾವ್, ಇವರು ಸರ್ಕಾರದ ಆದೇಶ ಸಂಖ್ಯೆ: ನಅಇ 258 ಇಎಂಸಿ 94, ದಿನಾಂಕ: 9.12.98 ರಲ್ಲಿ ತಿಳಿಸಿರುವಂತೆ ಮುಖ್ಯಾಧಿಕಾರಿ ಶ್ರೇಣಿ-2 ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಮುಖ್ಯಾಧಿಕಾರಿ ಶ್ರೇಣಿ-2 ಹುದ್ದೆಯಲ್ಲಿ ಕರ್ತವ್ಯ ವಹಿಸಿಕೊಂಡ ದಿನಾಂಕದಿಂದ ಎರಡು ವರ್ಷದೊಳಗಾಗಿ ಪಾಸು ಮಾಡತಕ್ಕದ್ದು.
2. ಪ್ರಸ್ತುತ ಹೊರಡಿಸಿರುವ ವಿವಿಧ ವೃಂದಗಳ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಯಾವುದೇ ಮಾರ್ಪಾಟುಗಳನ್ನು ಮಾಡಲು ನ್ಯಾಯಾಲಯಗಳು ಆದೇಶಿಸಿದಲ್ಲಿ, ಆ ಪ್ರಕಾರ ಪೌರಾಡಳಿತ ನಿರ್ದೇಶಕರು 2 ತಿಂಗಳೊಳಗಾಗಿ ಈ ಬಗ್ಗೆ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿಯನ್ನು ಹೊರಡಿಸಿ, ಸರ್ಕಾರಕ್ಕೆ ತಿಳಿಸತಕ್ಕದ್ದು.

ಸದರಿ ನೌಕರರನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ-2 ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸುವವರೆಗೆ ಮತ್ತು ಮುಂದಿನ ಆದೇಶದವರೆಗೆ ಅವರು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ರಾಘವೇಂದ್ರಾಚಾರ್**

ಪಿ.ಆರ್.1126

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಡಿ ಕರ್ತವ್ಯ ನಿರ್ವಹಿಸುತ್ತಿರುವ ನ್ಯಾಯ ಬೆಲೆ ಅಂಗಡಿಗಳನ್ನು ಗ್ರಾಮ ಪಂಚಾಯಿತಿಗಳ ಮೇಲ್ವಿಚಾರಣೆಗೆ ವರ್ಗಾಯಿಸುವ ಕುರಿತು-ಅನುಮೋದನೆ.

**ಓದಲಾಗಿದೆ :** 1. ದಿನಾಂಕ: 23.1.2004 ರಂದು ನಡೆದ ಬೇಲೂರು ಘೋಷಣೆ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಧಾರವಾಡ ಜಿಲ್ಲೆಯ ಬೇಲೂರು ತಾಲ್ಲೂಕಿನಲ್ಲಿ ದಿನಾಂಕ: 23.1.2004 ರಂದು ಪಂಚಾಯತ್‌ರಾಜ್ ಸದಸ್ಯರು ಹಾಗೂ ಸ್ಥಳೀಯ ಸಂಸ್ಥೆಗಳು ನಡೆಸಿದ ಸಭೆಯ ತೀರ್ಮಾನದಂತೆ ಸಾರ್ವಜನಿಕ ವಿತರಣಾ ಪದ್ಧತಿಯನ್ನು ಗ್ರಾಮ ಪಂಚಾಯತ್‌ಗಳ ಸುಪರ್ದಿಗೆ ನೀಡುವಂತೆ ಘೋಷಣೆ ಮಾಡಲಾಗಿದೆ. ಈ ಸಭೆಯ ನಡವಳಿಯ ಹಿನ್ನೆಲೆಯಲ್ಲಿ ದಿನಾಂಕ: 27.5.2004 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಸಭೆ ಜರುಗಿದ್ದು, ಆ ಸಂದರ್ಭದಲ್ಲಿ ಪಡಿತರ ಚೀಟಿಗಳನ್ನು ಗ್ರಾಮ ಪಂಚಾಯಿತಿಗಳ ಮುಖಾಂತರವೇ ವಿತರಿಸಲು ನಿರ್ದೇಶನ ನೀಡಿರುತ್ತಾರೆ. ಭಾರತ ಸಂವಿಧಾನದ ಆರ್ಟಿಕಲ್ 243 (ಜಿ)ಗೆ 73ನೇ ತಿದ್ದುಪಡಿಯನ್ನು ಮಾಡಿ, 11ನೇ ಅನುಚ್ಛೇದವನ್ನು ಸೇರಿಸಲಾಗಿದೆ. ಸದರಿ ಅನುಚ್ಛೇದವು ರಾಜ್ಯ ಸರ್ಕಾರದಿಂದ ಪಂಚಾಯತ್ ರಾಜ್ ಸಂಸ್ಥೆಗಳಿಗೆ ವರ್ಗಾಯಿಸಬಹುದಾದ 29 ವಿಷಯಗಳನ್ನು ಒಳಗೊಂಡಿದ್ದು, ಅದರಲ್ಲಿ 28ನೇ ವಿಷಯವು ಸಾರ್ವಜನಿಕ ವಿತರಣಾ ಪದ್ಧತಿಗೆ ಸಂಬಂಧಿಸಿರುತ್ತದೆ. ಮಾರ್ಪಡಿಸಿದ ಮಾರ್ಗಸೂಚಿಗಳಂತೆ ಸಾರ್ವಜನಿಕ ವಿತರಣೆ ಕಾರ್ಯವನ್ನು 3 ಹಂತಗಳಲ್ಲಿ ನಿರ್ವಹಿಸಬಹುದಾಗಿದೆ. ಉದಾಹರಣೆಗೆ; ಗ್ರಾಮ ಪಂಚಾಯತ್‌ಗಳು, ತಾಲ್ಲೂಕು ಪಂಚಾಯತ್‌ಗಳು ಮತ್ತು ಜಿಲ್ಲಾ ಪಂಚಾಯತ್‌ಗಳು. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಈ ಕಾರ್ಯವನ್ನು ಸುಲಲಿತವಾಗಿ ವರ್ಗಾಯಿಸಲು ಸೂಕ್ತವಾಗಿ ಸಂಯೋಜಿಸಿದ ಕಾರ್ಯನೀತಿಯನ್ನು ತೆಗೆದುಕೊಳ್ಳಲು ತೀರ್ಮಾನಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಆನಾಸ 63 ಡಿಆರ್‌ಎ 2004, ಬೆಂಗಳೂರು, ದಿನಾಂಕ: 12ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು, ಸಾರ್ವಜನಿಕ ವಿತರಣಾ ಪದ್ಧತಿಯನ್ನು ಈ ಕೆಳಕಂಡ ಷರತ್ತುಗಳೊಂದಿಗೆ ರಾಜ್ಯದ ಗ್ರಾಮ ಪಂಚಾಯತ್‌ಗಳ ಸುಪರ್ದಿಗೆ ವರ್ಗಾಯಿಸಲು ಅನುಮತಿ ನೀಡಲಾಗಿದೆ;

(ಎ) ಸಂವಿಧಾನ ತಿದ್ದುಪಡಿಯಂತೆ ಸಾರ್ವಜನಿಕ ವಿತರಣಾ ಪದ್ಧತಿಯ ಕಾರ್ಯದ ಮೇಲ್ವಿಚಾರಣೆ ಮತ್ತು ನಿರ್ವಹಣೆಯನ್ನು ಗ್ರಾಮ ಪಂಚಾಯತ್‌ಗಳಿಗೆ ವಹಿಸಿದ್ದು, ಅದನ್ನು ಗ್ರಾಮ ಪಂಚಾಯತ್‌ಗಳ ಮಟ್ಟದಲ್ಲಿ ನಿರ್ವಹಿಸುವುದಿಲ್ಲದೇ, ಈ ವ್ಯವಸ್ಥೆಯ ಕುರಿತಂತೆ ಗ್ರಾಹಕರಲ್ಲಿ ಜಾಗೃತಿ ಮೂಡಿಸುವುದು. ಈ ಕಾರ್ಯವನ್ನು ಗ್ರಾಮ ಪಂಚಾಯತಿಯು ಆಹಾರ ಖಾತರಿ ಸಮಿತಿ ಯಡಿ ಈ ಕೆಳಕಂಡ ಸದಸ್ಯರನ್ನು ಒಳಗೊಂಡಂತೆ ಒಂದು ಉಪ ಸಮಿತಿಯನ್ನು ರಚನೆ ಮಾಡಿಕೊಳ್ಳುವುದು.

1. ಗ್ರಾಮ ಪಂಚಾಯತಿಯ ಸಾಮಾಜಿಕ ನ್ಯಾಯ ಸಮಿತಿಯ ಅಧ್ಯಕ್ಷರೇ ಈ ಸಮಿತಿಯ ಅಧ್ಯಕ್ಷರಾಗಿರತಕ್ಕದ್ದು.
2. ಗ್ರಾಮ ಪಂಚಾಯತಿಯ ಪರಿಶಿಷ್ಟ ಜಾತಿಯ ಒಬ್ಬ ಸದಸ್ಯರು;
3. ಗ್ರಾಮ ಪಂಚಾಯತಿಯ ಪರಿಶಿಷ್ಟ ಪಂಗಡದ ಒಬ್ಬ ಸದಸ್ಯರು;
4. ಗ್ರಾಮ ಪಂಚಾಯತಿಯ ಒಬ್ಬ ಮಹಿಳಾ ಸದಸ್ಯರು.
5. ಗ್ರಾಮ ಪಂಚಾಯತಿಯ ಕಾರ್ಯದರ್ಶಿಗಳು ಇದಕ್ಕೆ ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ.

ಗ್ರಾಮ ಪಂಚಾಯಿತಿಯ ಅವಧಿಯು ಮುಕ್ತಾಯಗೊಂಡಾಗ, ಈ ಸಮಿತಿಯ ಅವಧಿಯು ಕೊನೆಗೊಳ್ಳುತ್ತದೆ.

(ಎ) ಗ್ರಾಮ ಪಂಚಾಯಿತಿಯ ಪರಿಧಿಯಲ್ಲಿರುವಂತಹ ನ್ಯಾಯ ಬೆಲೆ ಅಂಗಡಿಗಳ ಮೇಲ್ವಿಚಾರಣೆ ಮತ್ತು ನಿರ್ವಹಣೆಯ ಜವಾಬ್ದಾರಿಯು ಈ ಸಂಸ್ಥೆಯದಾಗಿರುತ್ತದೆ. ಸದರಿ ಸಮಿತಿಯು ತಪಾಸಣೆ ಮತ್ತು ಮುಕ್ತಾಯದ ಶಿಲ್ಕು, ಆಹಾರ ಧಾನ್ಯಗಳ ಸ್ವೀಕೃತಿಗಳು ಮತ್ತು ಪಡಿತರ ಚೀಟಿದಾರರಿಗೆ ಆಹಾರಧಾನ್ಯಗಳನ್ನು ವಿತರಣೆ, ಸಂಗ್ರಹಣೆ ಮತ್ತು ಮಾರಾಟದ ರಿಜಿಸ್ಟರ್‌ಗಳ ತಪಾಸಣೆ, ಬಿಲ್ ಪುಸ್ತಕ ಮತ್ತು ವಿತರಿಸಿದ ಪ್ರಮಾಣದ ನಿಖರತೆ ಬಗ್ಗೆ ಖಚಿತ ಪಡಿಸಿಕೊಳ್ಳುವುದು. ಇದಲ್ಲದೆ ಸರಿಯಾದ ತೂಕ ಮತ್ತು ಸರ್ಕಾರ ನಿಗದಿಪಡಿಸಿದ ಬೆಲೆಯಲ್ಲಿ ಮಾರಾಟ ಮಾಡಿದ ಬಗ್ಗೆ ತನಿಖೆ ಮಾಡುವುದು ಇದರ ಜವಾಬ್ದಾರಿಯಾಗಿರುತ್ತದೆ. ಇದಲ್ಲದೆ ವಿತರಿಸಿದ ಆಹಾರಧಾನ್ಯಗಳ ಗುಣಮಟ್ಟವು ನಿರ್ದಿಷ್ಟಪಡಿಸಿದ ಮಟ್ಟದಲ್ಲಿ ಇದೆಯೇ ಎಂಬುದನ್ನು ಖಾತರಿಪಡಿಸಿಕೊಳ್ಳುವುದು. ಸದರಿ ಸಮಿತಿಯು ನ್ಯಾಯ ಬೆಲೆ ಅಂಗಡಿಗಳನ್ನು ಸರ್ಕಾರವು ನಿಗದಿಪಡಿಸಿದ ವೇಳೆಯಲ್ಲಿ ತೆರೆಯುವುದನ್ನು ಗಮನಿಸುವುದು. ಈ ಸಮಿತಿಯನ್ನು ರಚನೆ ಮಾಡಲು ಸದರಿ ಗ್ರಾಮ ಪಂಚಾಯಿತಿಯ ಕಾರ್ಯದರ್ಶಿಗಳು ಆದೇಶವನ್ನು ಹೊರಡಿಸುವುದು.

(ಬಿ) ಇದಲ್ಲದೆ ಭಾರತ ಸರ್ಕಾರವು ಹೊರಡಿಸಿದ ಮಾರ್ಗಸೂಚಿಗಳಂತೆ, ಪ್ರತಿ ನ್ಯಾಯ ಬೆಲೆ ಅಂಗಡಿಗೆ ಈ ಕೆಳಕಂಡ 7 ಜನ ಪಡಿತರ ಚೀಟಿದಾರರನ್ನು ಸದಸ್ಯರನ್ನಾಗಿಸಿಕೊಂಡು ಒಂದು ಜಾಗೃತಿ ಸಮಿತಿಯನ್ನು ರಚಿಸುವುದು.

1. ಬಿಪಿಎಲ್ ಮತ್ತು ಅಂತ್ಯೋದಯ ಅನ್ನ ಯೋಜನೆಯ ಪಡಿತರ ಚೀಟಿಯ 5 ಮಹಿಳಾ ಸದಸ್ಯರನ್ನು ಹೊಂದಿರತಕ್ಕದ್ದು. ಇದರಲ್ಲಿ ಒಬ್ಬರು ಪರಿಶಿಷ್ಟ ಜಾತಿ, ಒಬ್ಬರು ಪರಿಶಿಷ್ಟ ಪಂಗಡ ಮತ್ತು ಇಬ್ಬರು ಹಿಂದುಳಿದ ವರ್ಗದ ಸದಸ್ಯರು ಹಾಗೂ ಒಬ್ಬರು ಸಾಮಾನ್ಯ ವರ್ಗದವರು;
2. ಸ್ಥಳೀಯವಾಗಿ ಚುನಾಯಿತ ಸದಸ್ಯರೊಬ್ಬರು,
3. ಒಬ್ಬರು ಸಾಮಾಜಿಕ ಕಾರ್ಯಕರ್ತರು ಅಥವಾ ಸ್ಥಳೀಯ ಸ್ವ ಸಹಾಯ ಮಹಿಳಾ ಸ್ವಶಕ್ತಿ ಗುಂಪಿನ ಅಧ್ಯಕ್ಷರು ಅಥವಾ ಸ್ತ್ರೀ ಶಕ್ತಿಯ ಗುಂಪಿನ ಮುಖ್ಯಸ್ಥರು ಅಥವಾ ಸದಸ್ಯರು;

(ಸಿ) ತಮ್ಮ ಗ್ರಾಮದಲ್ಲಿನ ಅನ್ನಪೂರ್ಣ, ಅಂತ್ಯೋದಯ ಅನ್ನ ಯೋಜನೆ, ಬಿಪಿಎಲ್ ಮತ್ತು ಎಪಿಎಲ್ ಕುಟುಂಬಗಳ ಅರ್ಹ ಫಲಾನುಭವಿಗಳನ್ನು ಗುರುತಿಸುವ ಜವಾಬ್ದಾರಿಯು ಗ್ರಾಮ ಸಭೆಯದ್ದಾಗಿರುತ್ತದೆ.

(ಡಿ) ಸಾರ್ವಜನಿಕ ವಿತರಣಾ ಪದ್ಧತಿಯು ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯಿತಿಗಳಿಗೆ ಸೇರಿದ್ದು, ಅದರ ಮೇಲ್ವಿಚಾರಣೆ ಮತ್ತು ನಿರ್ವಹಣೆಯ ಜವಾಬ್ದಾರಿ ತಾಲ್ಲೂಕು ಪಂಚಾಯಿತಿ ಸಮಿತಿಗಳಿಗೆ ಸೇರಿದ್ದಾಗಿರುತ್ತದೆ. ಹೀಗೆ ಜಿಲ್ಲಾ ಮಟ್ಟದಲ್ಲಿಯೂ ಕೂಡಾ ಜಿಲ್ಲಾ ಪಂಚಾಯಿತಿಗಳಿಗೆ ಸೇರಿದ್ದಾಗಿರುತ್ತದೆ. ತಾಲ್ಲೂಕಿನ ಪರಿಧಿಯಲ್ಲಿರುವ ನ್ಯಾಯ ಬೆಲೆ ಅಂಗಡಿಗಳು ಮತ್ತು ಸಾರ್ವಜನಿಕ ವಿತರಣಾ ಪದ್ಧತಿ ಉಸ್ತುವಾರಿ ಮತ್ತು ನಿರ್ವಹಣೆ ತಾಲ್ಲೂಕು ಸಮಿತಿಯ ಜವಾಬ್ದಾರಿಯಾಗಿರುತ್ತದೆ. ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಸಾಮಾಜಿಕ ನ್ಯಾಯ ಸಮಿತಿಯು ನ್ಯಾಯ ಬೆಲೆ ಅಂಗಡಿಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು. ತಾಲ್ಲೂಕಿನ ತಹಶೀಲ್ದಾರ್ ಹಾಗೂ ಕಾರ್ಯನಿರ್ವಹಣಾಧಿಕಾರಿಗಳ ಅಧೀನದಲ್ಲಿ ಆಹಾರ ಶಿರಸ್ತೇದಾರರು ಮತ್ತು ಆಹಾರ ನಿರೀಕ್ಷಕರು ಕರ್ತವ್ಯ ನಿರ್ವಹಿಸುವುದು. ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಜಿಲ್ಲಾಧಿಕಾರಿಯ ಅಧೀನದಲ್ಲಿ ಆಹಾರ, ನಾಗರೀಕ ಸರಬರಾಜು ಉಪ ನಿರ್ದೇಶಕರು ಕಾರ್ಯನಿರ್ವಹಿಸುವುದು. ಜಿಲ್ಲಾ ಮಟ್ಟದಲ್ಲಿ ಆಹಾರಧಾನ್ಯಗಳ ಹಂಚಿಕೆಯನ್ನು

ಮುಖ್ಯ ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಣಾಧಿಕಾರಿ ತನ್ನ ಆಡಳಿತ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣಾ ಪ್ರದೇಶಗಳಿಗೆ ಹಂಚಿಕೆ ಮಾಡತಕ್ಕದ್ದು. ಹಾಗೆಯೇ ಜಿಲ್ಲಾಧಿಕಾರಿಗಳು ಮತ್ತು ತಹಶೀಲ್ದಾರ್‌ರವರು ತಮ್ಮ ವ್ಯಾಪ್ತಿಯೊಳಗೆ ಬರುವ ನಗರ ಪ್ರದೇಶಗಳಿಗೆ ಹಾಗೂ ಅನೌಪಚಾರಿಕ ಪ್ರದೇಶಗಳಿಗೆ ಆಹಾರಧಾನ್ಯಗಳನ್ನು ಹಂಚಿಕೆ ಮಾಡತಕ್ಕದ್ದು.

(ಇ) ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಾಹಣಾಧಿಕಾರಿಗಳ ಹಾಗೂ ಗ್ರಾಮ ಪಂಚಾಯಿತಿಯ ಕಾರ್ಯದರ್ಶಿಗಳ ಮೇಲೆ ಆಹಾರ, ನಾಗರೀಕ ಸರಬರಾಜು ಉಪ ನಿರ್ದೇಶಕರು ನಿಯಂತ್ರಣ ಹೊಂದಿದ್ದು, ಸದರಿಯವರು ಆಹಾರ ವಿಷಯಕ್ಕೆ ಸಂಬಂಧಿಸಿದಂತೆ ಕೋರಿದ ಅವಶ್ಯಕ ವರದಿಗಳನ್ನು ನೀಡಲು ಜವಾಬ್ದಾರರಾಗಿರುತ್ತಾರೆ.

(ಎಫ್) ಆಹಾರ ವಿಷಯಗಳಿಗೆ ಸಂಬಂಧಿಸಿದ ಎಲ್ಲಾ ಮಾಹಿತಿಗಳನ್ನು ಆಯುಕ್ತರವರು ಆನಾಸ ಇಲಾಖೆರವರಿಗೆ ನೀಡಲು ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಜವಾಬ್ದಾರರಾಗಿರುತ್ತಾರೆ.

(ಜಿ) ಸಗಟು/ಚಿಲ್ಲರೆ/ಅಮಾನತ್ತು, ರದ್ದುಗೊಳಿಸುವಿಕೆ ಮುಂತಾದ ವಿಷಯಗಳು ನ್ಯಾಯಿಕ ಸ್ವರೂಪದ ಪ್ರಕರಣಗಳನ್ನು ಅಧಿಕೃತಗೊಳಿಸುವ ನಿಯಂತ್ರಣವು ಹಾಲಿ ಜಿಲ್ಲಾಧಿಕಾರಿಗಳ ವಶದಲ್ಲಿರುತ್ತದೆ. ಈ ವಿಷಯವನ್ನು ಸಮಗ್ರವಾಗಿ ಪರಿಶೀಲಿಸಿ ಅವಶ್ಯಕವಾದ ಮಾರ್ಪಡು ಮಾಡಬಹುದಾಗಿದೆ.

ಮೇಲ್ಕಂಡ ಎಲ್ಲಾ ಹಂಚಿಕೆಯನ್ನು ಸರಳವಾಗಿ ಜಿಲ್ಲಾ ಪಂಚಾಯಿತಿಗಳಿಗೆ ಹಸ್ತಾಂತರಿಸಲು ಸಾರ್ವಜನಿಕ ವಿತರಣಾ (ನಿಯಂತ್ರಣ) ಆದೇಶಕ್ಕೆ ಸೂಕ್ತ ಮಾರ್ಪಡುಗಳನ್ನು ಸೂಚಿಸಿ, ಪ್ರಸ್ತಾವನೆಯನ್ನು ಆಯುಕ್ತರು, ಆನಾಸ ರವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ. ಹ. ಕಳ್ಳಿ**

ಪಿ.ಆರ್.1108

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## FOREST, ECOLOGY AND ENVIRONMENT SECRETARIAT

## ADDENDUM No. FEE 161 ENV 2002 Bangalore, dated: 28th July 2005

The Government has issued the Notification No. FEE 161 ENV 2002 dated: 20.11.2004 restricting the sale and purchase of loose 2-T oil for protecting and improving the quality of the environment as well as preventing, controlling and abating environment pollution within the Outer Ring Road Limits of Bangalore and within the City Corporation areas of Mysore, Mangalore. Hubli-Dharwad, Belgaum and Gulbarga.

The Ministry of Environment and Forests (MoEF), Government of India has issued Notification No. GSR 504(E) dated: 20.08.1998 under Environment (Protection) Act, 1986 prescribing specification, standard and test procedure for Two-Stroke Engine Oil.

Therefore in order to effectively implement the provisions of the Notification No. FEE 161 ENV 2002 dated: 20.11.2004 issued by the State Government the Notification is amended as mentioned below.

In the definition portion, for Para 2(a), the following shall be substituted:

2(a) "2-T Oil" means lubricating oil (used in 2-stroke petrol driven vehicle engines) meeting the following specification.

Specification of Two-Stroke Engine Oil.

| Specification | Standard | Test Procedure |
|---|---|---|
| Two-Stroke Engine Oil Grade JASO-FC as per specification No. JASO M-345-93. | Minimum Smoke Index of 85. | JASO-M-342-92 for JASO-FC. |
| Two-Stroke Engine Oil Grade API TC as per Specification No. ASTM D-4859. | Minimum Smoke Index of 85. | ASTM D-4857 for API TC. |

After Para 3, the following shall be inserted:

**1. Manufacture and sale of Two-Stroke Engine Oil in containers:**

(a) Two-Stroke Engine Oil for 2-3 wheelers manufactured. blended. filled, sold or marketed in containers by any Company shall conform to the standard and specification prescribed above.

(b) Two-Stroke Engine Oil for 2-3 wheelers sold in retail or wholesale in containers by any person shall conform to the standard and specification prescribed above.

This notification is issued in exercise of the powers conferred under Section 19(5) of the Air (Prevention and Control of Pollution) Act, 1981 read with Section 5 of Environment (Protection) Act, 1986. Non-compliance of the above provisions of the Notification shall attract penal provisions as provided under the Environment (Protection) Act, 1986.

By Order and in the name of Governor of Karnataka,

PR-1154

**N. R. Jaganmatha**

Under Secretary to Government,

Forest, Ecology and Environment Department.